

ಗಿರಿರಾಯಾ ಗಿರಿರಾಯಾ ॥ ಪ ॥

ಶರಣಾಗತರಿಂಗೆ ಕರುಣಾಕರ ವೆಂಕಟ ॥ ಅ.ಪ ॥

ಸ್ಮರಿಸುವೆ ನಿನ್ನನು ಸರಸಿಜಭವನುತ
ಸ್ಮರತಾಮರಶರು ದುರಿತವಿದೂರ ॥ 1 ॥

ಶ್ರೀಕರ ಭವಭಯ ನೂಕಿಸಿ ಎನ್ನನು
ಸಾಕೆಲೊ ಭೂಧರ ಸೂಕರರೂಪ ॥ 2 ॥

ಆಪದ್ಬಾಂಧವ ಶ್ರೀಪತಿ ಎನ್ನನು
ಕಾಪಾಡೆಲೆ ಸಕಲಾಪದ್ಧರ ವೆಂಕಟ ॥ 3 ॥

ಕಾಮಿತ ಫಲಪ್ರದ ಈ ಮಹೀತಳದೊಳು
ಸಾಮಜವರದ ಸುಧಾಮನಸಖ ಪೊರಿ ॥ 4 ॥

ದಾತಗುರು ಜಗನ್ನಾಥವಿಠಲ
ಪ್ರೀತನಾಗೊ ನಿನ್ನದೂತನು ನಾನೈ ॥ 5 ॥

ಶ್ರೀ ಗುರುಜಗನ್ನಾಥದಾಸರು.

# ಓದುಗರ ಓಲೆ

ಮಾನ್ಯರೆ;

ಆಗಸ್ಟ್ ತಿಂಗಳ ಸಪ್ತಗಿರಿಯಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿ ಬ್ರಹ್ಮೋತ್ಸವ ಕಾರ್ಯಕ್ರಮ ಪ್ರಕಟವಾಗಿರುವುದು ಸರಿಯಷ್ಟೆ; ಅದರ ಪೂರ್ಣ ವಿವರಗಳನ್ನು ಮುಂದಿನ ಸಂಚಿಕೆಯಲ್ಲಿ ನೀಡುವಿರೆಂದು ನಂಬಿದ್ದೇವೆ.

ಗೋವಿಂದರಾಜ ಶೆಟ್ಟರ್, ವಿಜಯಲಕ್ಷ್ಮಿ ಶೆಟ್ಟರ್, ಹಿಟ್ನಾಳ.

ಸ್ವಾಮಿ;

ಆಗಸ್ಟ್ ತಿಂಗಳಲ್ಲಿ ಪ್ರಕಟವಾದ ಸಂಸ್ಕೃತಿ ಹಾಗೂ ಸ್ತ್ರೀ ಲೇಖನವು ಒಳ್ಳೆಯ ಪ್ರಭಾವಪೂರ್ಣ ರೀತಿಯಲ್ಲಿ ಮೂಡಿಬಂದಿದೆ. ಇಂತಹ ಕೃತಿಗಳನ್ನು ಆಗಿಂದಾಗ್ಗೆ ಧಾರ್ಮಿಕ ಹಾಗೂ ಐತಿಹಾಸಿಕ ಉದಾಹರಣೆಗಳಿಂದ ಕೂಡಿದಂತೆ ಪ್ರಕಟಿಸಿದರೆ ಸ್ತ್ರೀಸಮಾಜದ ಮೇಲೆ ಹೆಚ್ಚಿನ ಪ್ರಭಾವ ಬೀರದೆ ಇರದು.

ಶ್ರೀನಿವಾಸರಾವ್, ಬೀದಿನಾಳ.

ಸ್ವಾಮಿ;

ಆಗಸ್ಟ್ ತಿಂಗಳಲ್ಲಿ ಮಹಾರಾಷ್ಟ್ರದಲ್ಲಿ ಹರಿದಾಸಸಾಹಿತ್ಯೋತ್ಸವ ನಡೆದ ವಿವರಗಳನ್ನು ಪ್ರಕಟಿಸಿದ್ದೀರಿ. ಹೀಗೆಯೇ ಭಾಗವತ ಭಕ್ತಿ ಪಂಥದ ಸಂದೇಶವನ್ನು ದೇಶದ ನಾಲ್ಕು ಮೂಲೆಗಳಿಗೂ ತಲುಪಿಸಿದಲ್ಲಿ ಇಂದಿನ ಅಗತ್ಯವಾದ ಭಾವನಾತ್ಮಕ ಏಕತೆ ಸಾಧ್ಯವಾದೀತು. ಈ ದಿಕ್ಕಿನಲ್ಲಿ ತಿ.ತಿ.ದೇ.ಗಳ ದಾಸಸಾಹಿತ್ಯ ಪ್ರಾಜೆಕ್ಟ್ ಕೆಲಸಮಾಡಲಿ ಎಂದು ಹಾರೈಸುತ್ತೇನೆ.

ರಾಮಮೂರ್ತಿ, ಧಾರವಾಡ.

ಮಾನ್ಯರೆ;

ಆಗಸ್ಟ್ ತಿಂಗಳಿನಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಪವಿತ್ರೋತ್ಸವದ ಬಗ್ಗೆ ವಿವರಗಳನ್ನು ನೀಡಿದ್ದೀರಿ. ಹೀಗೆಯೇ ಬ್ರಹ್ಮೋತ್ಸವ, ತೆಪ್ಪೋತ್ಸವ, ಪುಷ್ಪೋತ್ಸವ ಮೊದಲಾದ ಉತ್ಸವಗಳ ಬಗ್ಗೆ ಆಯಾ ತಿಂಗಳುಗಳಲ್ಲಿ ವಿವರಗಳನ್ನು ನೀಡಿದಲ್ಲಿ ಯಾತ್ರಿಕರಿಗೂ ಓದುಗರಿಗೂ ಅನುಕೂಲಕರ.

ನಾರಾಯಣ ಶೆಟ್ಟಿ, ಬೆಂಗಳೂರು.

---



ಸಂಪುಟ ೧೬] ಅಕ್ಟೋಬರ್ ೧೯೮೫ [ಸಂಚಿಕೆ ೫

# ವಿಷಯಸೂಚಿ


| | | |
|---|---|---|
| ಪರಮಾತ್ಮನ ಪಂಚರೂಪಗಳು | ಡಿ. ಕೃಷ್ಣಯ್ಯಂಗಾರ್ | ... 5 |
| ಶ್ರೀನಿವಾಸ ವೈಭವ | ಬ. ನ. ಗುಂಡೂರಾವ್ | ... 7 |
| ಪಂಚತಂತ್ರ | ಡಾ॥ ಎಸ್. ಅನಂತರಂಗಾಚಾರ್ | ... 9 |
| ಶ್ರೇಷ್ಠಾವತಾರಗಳು | ಸಿ. ಗೋವಿಂದಾಚಾರ್ | ... 13 |
| ಪ್ರಾಚೀನ ಭಾರತದ ವಿದ್ಯಾಕೇಂದ್ರಗಳು | ಗಣಪತಿ ಭಟ್ | ... 17 |
| ಗುರುಜಗನ್ನಾಥದಾಸರು ರಚಿಸಿದ ವೆಂಕಟೇಶ ಸ್ತುತಿ | | ... 21 |
| ಕರ್ಮಯೋಗಿ ಅನಂತಸೂರಿ | ಲ.ನ. ಶಾಸ್ತ್ರಿ | ... 25 |
| **ಕಿಶೋರಜಗತ್** | | |
| ಆದರ್ಶ ಗುರುಶಿಷ್ಯರು | ವಿ.ಎಸ್. ರಾಮಾನುಜಾಚಾರ್ಯ | ... 23 |
| **ಯುವವಾಣಿ** | | |
| ವಿಠಲದೇವಾಲಯ | ಡಾ॥ ಕೆ. ಸರ್ವೋತ್ತಮನ್ | ... 29 |
| ಭರತ ದೇವಸ್ಥಾನ | ಸುರೇಶಮಾನ | ... 30 |
| **ಗೃಹಲಕ್ಷ್ಮಿ** | | |
| ಶತರೂಪಾ | ರಘುಸುತ | ... 33 |
| ವಾರ್ತಾಲಹರಿ | | ... 38 |


ಮುಖ ಚಿತ್ರ : ಶ್ರೀ ವೆಂಕಟೇಶ್ವರಸ್ವಾಮಿ.

ಹಿಂಬದಿಯಲ್ಲಿ : ತಿರುಮಲೆಯಲ್ಲಿ ರಥೋತ್ಸವ.

ಒಳಗಡೆಯಲ್ಲಿ : 1. ಸರಸ್ವತೀಅವತಾರದಲ್ಲಿ ಶ್ರೀ ಪದ್ಮಾವತೀ ಅಮ್ಮನವರು.
2. ಪುಷ್ಪಯಾಗದಲ್ಲಿನ ಒಂದು ದೃಶ್ಯ.

ಗೌರವ ಸಂಪಾದಕರು :
ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ :
ಕೆ. ಸುಬ್ಬಾರಾವ್, ಎಂ.ಎ.,

ಉಪಸಂಪಾದಕ :
ಪಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥

# ಸಂಪಾದಕೀಯ

ಮನುಷ್ಯ ದೇವಾಲಯಕ್ಕೇಕೆ ಹೋಗುತ್ತಾನೆ? – ಮನ ಮಾರಾಬಟ್ಟೆಯಾಗಿರುವುದರಿಂದ. ಮನ ವೇಕೆ ಮಾರಾಬಟ್ಟೆಯಾಗಿದೆ? – ಭ್ರಾಂತಿಭರಿತ ಬದುಕಿನಿಂದ. ಇದನ್ನು ಹೇಳಿಕೊಳ್ಳುವುದು ಕಷ್ಟವಾದರೂ ಅಕ್ಷರಶಃ ನಿಜ. ಮಾಯಾಧಾರಿಯಿಂದಾಗಿ ಭ್ರಾಂತಿಭವದೊಳಗೆ ಬಿದ್ದಿದ್ದೇವೆ. ನಾವು ಮಾತ್ರವೇ ಏನು, ಚರಾಚರ ಪ್ರಪಂಚವೆಲ್ಲ ಹಾಗೆ ಉಂಟಾದದ್ದೇ. ಮೇಲ್ಮೆಯ ಅಂಶವೆಂದರೆ ಆಲೋಚನಾಶಕ್ತಿ ಇರುವ ಮನುಷ್ಯನೆಂಬ ಪ್ರಾಣಿ ಮಾತ್ರ ನಾನೇಕೆ ಹೀಗಾಗುತ್ತಿದ್ದೇನೆ? ನನಗೇಕೆ ಹೀಗಾಗುತ್ತಿದೆ? ಎಂದು ಕತ್ತಲ ದಾರಿಯೊಳಗೆ ತಡಕಾಡಬಲ್ಲ. ಎಲ್ಲ ಕಡೆಯೂ ಕಾಳಕತ್ತಲೆಯನ್ನೇ ಕಾಣುತ್ತ ಬೆಳಕಿನೆಡೆಗೆ ಕೈಹಿಡಿದು ನಡೆಸೆನ್ನನು ಎಂದು ತನ್ನಂತೆಯೇ ಇದ್ದೂ ತನಗಿಂತ ಅನೇಕ ಕೋಟಿಪಟ್ಟು ಹಿರಿಮೆಯನ್ನು ಹೊಂದಿದವನ ಮುಂದೆ ಮೊರೆಯಿಟ್ಟುಕೊಂಡು ಮನಃಶಾಂತಿಯನ್ನು ಹೊಂದುತ್ತಾನೆ. ಇಂತಹವರನ್ನೇ ಭಗವಂತ ಆರ್ತರುಗಳು ಎಂದದ್ದು.

ಪಥಭ್ರಾಂತನು ಪ್ರಶಾಂತಿಯನ್ನು ಹೊಂದಲೂ, ಮುಂದಿನ ಗಮ್ಯವನ್ನು ಕುರಿತು ಚಿಂತಿಸಲೂ ಒಂದು ವಾತಾವರಣ ಅಗತ್ಯ. ಎಂತಲೇ ನಮ್ಮ ಪೂರ್ವಿಕರು ಆರಾಧನಾಲಯಗಳನ್ನು ಆರ್ಭಟಗಳಿಂದ ದೂರವಾಗಿರುವ ಗುಹೆಗಳಲ್ಲಿ ಪವಿತ್ರ ಪರ್ವತ ನದ ನದೀ ತಟಗಳಲ್ಲಿ ಏರ್ಪಡಿಸಿ, ಶ್ರದ್ಧೆ, ಶ್ರಮ ಇದ್ದವರಿಗೆಲ್ಲ ಆರಾಧನೆಯಲ್ಲೂ ಅನಂತರವೂ ಸಂಪೂರ್ಣತೃಪ್ತಿ ದೊರೆಯುವಂತೆ ನೆರವು ನೀಡಿದರು. ಆಲಯಶಿಖರಗಳೂ ಧ್ವಜಗಳೂ ಸುದೂರದ ಜನವನ್ನು ಹೇಗೆ ಆಕರ್ಷಿಸುತ್ತಿದ್ದವೆಂಬುದು ಇತಿಹಾಸ ಬಲ್ಲವರಿಗೆ ತಿಳಿದ ವಿಷಯವೇ ಆಗಿದೆ.

ಆದರೆ ಕಾಲಪರಿವರ್ತನೆಯೊಂದಿಗೆ ಮನಃಶಾಂತಿಯನ್ನು ನೀಡಬಲ್ಲ ಆಲಯಗಳು ಮಾನ್ಯತೆಯನ್ನು ಕಳೆದುಕೊಂಡುವು. ಆಕೃತಿಯಲ್ಲೂ, ಆರಾಧನೆಯಲ್ಲೂ ಆಗಸದೆತ್ತರದ ಆಲಯಗಳು ನಿತ್ಯನಿವೇದನವನ್ನೂ ಕಳೆದುಕೊಂಡು, ಕಲಾಖಂಡಗಳಾಗಿ ಖಂಡಾಂತರಗಳಿಗೆ ಓಡತೊಡಗಿದವು.

ಪ್ರಾಚೀನಕಲಾಗರಿಮೆಗಳೊಂದಿಗೆ ಆದರ್ಶಗಳನ್ನೂ ಸಹ ಪರಿರಕ್ಷಿಸಲು ಕೈಲಾದವರು, ಶಕ್ತರಾದವರು, ಪ್ರಯತ್ನಿಸದಿದ್ದಲ್ಲಿ ಮಾದರಿಗಳಾಗಿ ನಾಲ್ಕೈದು ದೇವಾಲಯಗಳು ಮಿಕ್ಕಿ, ಉಳಿದವು ಹೀಗಿದ್ದವು ಎಂದು ಮುಂದಿನವರು ಇತಿಹಾಸಪಾಠ ಓದುವಂತಾಗುವ ಪ್ರಮಾದವಿದೆ.

ಕಾಲ ಪುರುಷನ ಕಾಲಿನಡಿ ಸಿಕ್ಕದೆ ಸುರಕ್ಷಿತವಾಗಿ ನಿಂತ ಕೆಲವೇ ದೇವಾಲಯಗಳಲ್ಲಿ ತಿರುಮಲೆಯ ಶ್ರೀ ವೆಂಕಟೇಶ್ವರ ದೇವಾಲಯವೂ ಒಂದು. ಎಂತಲೇ ಈ ಆಲಯಕ್ಕೆ ಪರಂಪರೆಯ ವಿಧಾನಗಳು ಹೆಚ್ಚು ಕಡಿಮೆ ಹಾಗೇ ಇದ್ದು, ಹೊಸವನ್ನು ಏರ್ಪಡಿಸಿಕೊಳ್ಳಲಾಗುತ್ತಿದೆ.

ತದನುಗುಣವಾಗಿ ಆಲಯಪಾಲಕವ್ಯವಸ್ಥೆ ಕೂಡ ಆಲಯದ ಆದರ್ಶಗಳನ್ನು ಪಾಲಿಸಲು ತಕ್ಕ ಕ್ರಮಗಳನ್ನು ಕೈಗೊಳ್ಳುತ್ತಿದೆ. ದೇವಸ್ಥಾನದ ಪರಿಪಾಲನೆಯಲ್ಲಿನ ಆಲಯಗಳೆಲ್ಲವನ್ನೂ ಸರ್ವ ಆಧ್ಯಾತ್ಮಿಕ ಕಲಾಸಮನ್ವಿತಗೊಳಿಸುವುದರೊಂದಿಗೆ ತಿರುಮಲೆಯ ದೇವಾಲಯದ ಪಾವಿತ್ರ್ಯವನ್ನೂ ಹೆಚ್ಚಿಸಲು ಅನೇಕ ಕಾರ್ಯಕ್ರಮಗಳುಂಟಾಗಿವೆ.

ಪ್ರಶಾಂತ ವಾತಾವರಣ, ರಾಮಣೀಯಕತೆಗಳ ಪರಿವರ್ಧನೆಗೊಳಿಸಲು ನಂದನವನಗಳ ಅಭಿವೃದ್ಧಿ ಮುನಿವಾಟಿಕೆಗಳ ನಿರ್ಮಾಣ, ವಿಸ್ತೃತ ಜಲಾಶಯ ಜಾಲ, ಹರಿಣ ವನಗಳು, ಧಾರ್ಮಿಕ ಪ್ರಬೋಧ ಭವನಗಳು, ವ್ಯೋಮವಿಜ್ಞಾನಸೌಧಗಳು ಒಟ್ಟೊಟ್ಟಿಗೆ ಆಗುತ್ತಿವೆ.

ಆಲಯನಗರ ಪಾರಿಶುದ್ಧ್ಯ ಪ್ರಣಾಳಿಯನ್ವಯ ತಿ. ತಿ. ದೇ. ಮತ್ತೊಂದು ಬೃಹತ್ ಯೋಜನೆಯನ್ನು ಕೈಗೆತ್ತಿಕೊಂಡಿದೆ. ಹೆಚ್ಚಿನ ಸಂದಣಿಗೆ ಅವಕಾಶವೀಯದಂತೆ ತಿರುಮಲೆಯ ಹಲವೆಡೆಗಳ 2000 ಕುಟುಂಬಗಳನ್ನು ತಿರುಪತಿಯ ಪರಿಸರ ಪ್ರಾಂತಗಳಿಗೆ ತಕ್ಕ ಉಪಾಧಿಸೌಕರ್ಯಗಳೊಂದಿಗೆ ವರ್ಗಾಯಿಸುವ ಪ್ರಯತ್ನ ಆರಂಭವಾಗಿದೆ. ಹೆಜ್ಜೆ ಹೆಜ್ಜೆಗೂ ಕಾಣಿಸುವ ಅಂಗಡಿಗಳಿಗೆ ಬದಲು ವ್ಯಾಪಾರಕೇಂದ್ರವೊಂದರ ಏರ್ಪಾಡು ನಡೆದಿದೆ. ಆಧ್ಯಾತ್ಮಿಕ ಕಾರ್ಯಕ್ರಮಗಳಿಗಾಗಿ ಒಂದು ವಿಶಾಲ ಭವನ ನಿರ್ಮಾಣವಾಗುತ್ತಿದೆ. ಇವುಗಳಿಂದಾಗಿ ತಿರುಮಲೆಯ ವಾತಾವರಣ ಹೆಚ್ಚು ಪ್ರಶಾಂತವಾಗುವುದೆಂದೂ ಯಾತ್ರಿಕರಿಗೆ ಹೆಚ್ಚಿನ ದೈವಿಕ ಅನುಭವ ನೀಡುವ ಕೇಂದ್ರವಾಗುವುದೆಂದೂ ಹೇಳಬಹುದು.

ನಡೆದಿರುವುದು, ನಡೆದುಬೇಕಾಗಿರುವುದು, ಬಹಳವಿವೆ. ಆ ಕುಲಶೇಖರರು ಹೇಳಿದ 'ಘುಷ್ಯತೇ ಯಸ್ಯನಗರೇ ರಂಗಯಾತ್ರಾ ದಿನೇದಿನೇ'– ಎಂದ ಆ ಕಾವೇರಿರಂಗನ ಬಗೆಗಿನ ಭಕ್ತಿಭರಿತ ವಾತವರಣ ಈ ಕೋನೇರಿರಾಯನಿಗೂ ಕಲ್ಪಿಸಬೇಕೆಂಬುದೇ ದೇವಸ್ಥಾನಗಳ ಕಾತರ, ಅಪೇಕ್ಷೆ, ಅದಕ್ಕೆ ಬೇಕಿರುವುದು ಭಕ್ತಜನಸಹಕಾರ.

# ಪರಮಾತ್ಮನ ಪಂಚರೂಪಗಳು

ಪರಮಾತ್ಮನ ದಿವ್ಯಸ್ವರೂಪವು ಅಸಾಧಾರಣ ಧರ್ಮಗಳಿಂದ ಕೂಡಿದೆ. ಅವು ಯಾವುವೆಂದರೆ– ಸರ್ವಾಧಾರತ್ವ, ಸರ್ವನಿಯಂತೃತ್ವ, ಸರ್ವಶೇಷತ್ವ, ಸರ್ವಶರೀರತ್ವ ಮತ್ತು ಸರ್ವಕಾರಣತ್ವ. ಇವುಗಳ ಜೊತೆಗೆ ಉಭಯವಿಭೂತಿಕಾರ್ಯ ನಿರ್ವಾಹಕ್ಕಾಗಿಯೂ ಮತ್ತು ಭಕ್ತರನ್ನು ಅನುಗ್ರಹಿಸುವುದಕ್ಕಾಗಿಯೂ, ಪರಮಾತ್ಮನು, ಪರ, ವ್ಯೂಹ, ವಿಭವ, ಅಂತರ್ಯಾಮಿ ಮತ್ತು ಅರ್ಚಾ ಎಂದು ಪಂಚರೂಪಗಳನ್ನು ಧರಿಸುವನು. ಈ ರೂಪಗಳ ಅರ್ಥವಿವರಣೆಗೆ ಮೊದಲು ಇದನ್ನು ಒಂದು ಉದಾಹರಣೆಯ ಮೂಲಕ ಸೂಚಿಸುವುದು ಅಗತ್ಯ.

ಭೂಮಂಡಲದಲ್ಲಿ ಚಕ್ರವರ್ತಿ ಎನ್ನಿಸಿಕೊಂಡ ಧಾರ್ಮಿಕ ರಾಜನು, ರಾಜಕಾರ್ಯನಿರ್ವಾಹಕ್ಕಾಗಿ, ಐದು ವೇಷಧರಿಸಿ ಆಯಾ ರಾಜಕಾರ್ಯ ನಿರ್ವಹಿಸುವನು ಎಂದು ರಾಜನೀತಿಶಾಸ್ತ್ರ ತಿಳಿಸುವುದು. ಅವು ಯಾವುವೆಂದರೆ; ಅಟ್ಟಹಾಸ ಐಶ್ವರ್ಯದಿಂದ ಸಿಂಹಾಸನಾರೂಢನಾಗಿ, ಸಾಮಂತರಾಜರಿಂದ ಮತ್ತು ಪ್ರಜೆಗಳಿಂದ ಸೇವಿಸಲ್ಪಟ್ಟು, ಎಲ್ಲರಿಗೂ ನೇತ್ರಾನಂದವನ್ನುಂಟುಮಾಡುವ ರೂಪ ಅಥವ ವೇಷ. ದುಷ್ಟನಿಗ್ರಹ ಶಿಷ್ಟಪರಿಪಾಲನೆಗೆ ಮತ್ತು ರಾಜಧರ್ಮ ನಿರ್ವಾಹಕ್ಕಾಗಿ, ನ್ಯಾಯಾಸ್ಥಾನಗಳನ್ನು ರಚಿಸಿ, ಪ್ರಜೆಗಳ ಸುಖದುಃಖಗಳನ್ನು ತಿಳಿದು ನ್ಯಾಯ ವಿಮರ್ಶೆ ಮೂಲಕ ದುಷ್ಟರಿಗೆ ದಂಡನೆ ಶಿಷ್ಟರಿಗೆ ರಕ್ಷಣೆ ಕಲ್ಪಿಸುವುದಕ್ಕಾಗಿ ಧರಿಸುವ ವೇಷ. ಅರಣ್ಯದಲ್ಲಿ ವೃದ್ಧಿ ಹೊಂದಿ ಸ್ವೇಚ್ಛೆಯಾಗಿರುವ ದುಷ್ಟಮೃಗಗಳು ರಾಜ್ಯಕ್ಕೆ ತೊಂದರೆ ಕೊಟ್ಟಾಗ ತೊಂದರೆ ತಪ್ಪಿಸುವುದಕ್ಕಾಗಿ ಅವುಗಳ ಬೇಟೆಗಾಗಿ ಧರಿಸುವ ವೇಷ ಮೂರನೆಯದು. ರಾಜ್ಯದಲ್ಲಿ ಅಂತರ್ಗತವಾಗಿರುವ ಪ್ರಜೆಗಳಲ್ಲಿ ಯಾರು ದ್ರೋಹಿಗಳು, ಯಾರು ನಿಷ್ಕಪಟಿಗಳು, ಯಾರು ರಾಜಭಕ್ತರು, ಎಂಬುದನ್ನು ಕಂಡುಹಿಡಿಯುವುದಕ್ಕೆ ಪ್ರಚ್ಛನ್ನ ವೇಷಧರಿಸುವುದು ನಾಲ್ಕನೆಯದು. ಹೀಗೆ ಎಲ್ಲ ರಾಜ ಕಾರ್ಯಗಳನ್ನು ನಿರ್ವಹಿಸಿ, ಕೃತಕೃತ್ಯನಾಗಿ ಮನರಂಜನೆಗಾಗಿ ಉದ್ಯಾನ, ಪರ್ವತಪ್ರದೇಶ, ನದೀತೀರ–ಮುಂತಾದ ರಮಣೀಯ ಪ್ರದೇಶಗಳಲ್ಲಿ ಮಿತಪರಿವಾರದೊಡನೆ ಮನೋರಂಜನೆ ಕಾರ್ಯಗಳಲ್ಲಿ ಪ್ರವರ್ತಿಸುವ ವೇಷ ಐದನೆಯದು.

ಸಾಮಾನ್ಯನಾದ ಭೂಮಂಡಲದ ರಾಜನಿಗೆ ಕಾರ್ಯನಿರ್ವಾಹಕ್ಕಾಗಿ ಈ ಐದು ರೂಪಗಳು ಅಗತ್ಯವಾಗಿರುವಾಗ, ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕನೆಂದೂ, ಉಭಯವಿಭೂತಿಯೊಡೆಯನೆಂದೂ, ಪ್ರಸಿದ್ಧವಾಗಿರುವ ಶ್ರೀಮನ್ನಾರಾಯಣನಿಗೆ ಪಂಚರೂಪಗಳು ಅಗತ್ಯವೆಂದು ಹೇಳಬಹುದು.

> ಮನುಷ್ಯಾಕಾರಾಃ ಪಂಚೇತಿ
> ಪ್ರಾಹುರ್ವೇದಾಂತ ಪಾರಗಾಃ ।
> ಪರೋ ವ್ಯೂಹಶ್ಚ ವಿಭವೋ ನಿಯಂತಾ
> ಸರ್ವದೇಹಿನಾಂ ಅರ್ಚಾವತಾರಸ್ತಥಾ ॥

ಎಂದು ವಿಷ್ವಕ್ಸೇನ ಸಂಹಿತೆಯು ತಿಳಿಸುತ್ತದೆ.

**ಪರರೂಪ:—**

ನಿರತಿಶಯ ಆನಂದ ವರ್ಧಕನಾಗಿ, ದಿವ್ಯವಾದ ಶ್ರೀ ವೈಕುಂಠದಲ್ಲಿ ಶ್ರೀ, ಭೂ, ನೀಳಾಸಮೇತನಾಗಿ ತೇಜೋಮಯನಾಗಿ, ದಿವ್ಯಮಂಗಳ ವಿಗ್ರಹಯುಕ್ತನಾಗಿ ಶಂಖ ಚಕ್ರ ಗದಾ ಶಾರ್ಙ್ಗಾದಿ ಅಸಂಖ್ಯೇಯ ದಿವ್ಯಾಯುಧಧಾರಿಯಾಗಿ, ಕಿರೀಟ ನೂಪುರಾದಿ ದಿವ್ಯಾಭರಣ, ಭೂಷಿತನಾಗಿರುವ ಪರಮಾತ್ಮನ ರೂಪ ಪರರೂಪ. ಅನಂತ, ಗರುಡ ವಿಷ್ವಕ್ಸೇನನಾದಿ ನಿತ್ಯ ಸೂರಿಗಳು ಮತ್ತು ಮುಕ್ತಾತ್ಮರಿಂದ ನಿತ್ಯ ಕೈಂಕರ್ಯ ಸ್ವೀಕರಿಸುತ್ತ ಅವರಿಗೆ ದರ್ಶನಕೊಟ್ಟು ನೇತ್ರಾನಂದವನ್ನುಂಟುಮಾಡುವ ರೂಪ. ಹೀಗೆ ಆದಿಶೇಷ ಪರ್ಯಂಕದಲ್ಲಿ ದೇದೀಪ್ಯನಾಗಿ ಪ್ರಕಾಶಿಸುತ್ತಿರುವ ದಿವ್ಯರೂಪವೇ ಪರರೂಪ.

**ವ್ಯೂಹ :—**

ಲೀಲಾವಿಭೂತಿ ಕಾರ್ಯನಿರ್ವಾಹಕ್ಕಾಗಿ ಮತ್ತು ಬ್ರಹ್ಮಾದಿ ದೇವತೆಗಳ ವಿಚಾರವನ್ನು ವಿಮರ್ಶೆ ಮಾಡಲು ಕ್ಷೀರಾಬ್ಧಿ ಎಂಬ ನ್ಯಾಯಾಸ್ಥಾನವನ್ನು ಏರ್ಪಡಿಸಿ, ದುಷ್ಟನಿಗ್ರಹ, ಶಿಷ್ಟಪರಿಪಾಲನೆ ಮಾಡುವ ವ್ಯವಸ್ಥೆಗಾಗಿ ಸ್ವೀಕರಿಸುವ ರೂಪವೇ ವ್ಯೂಹರೂಪ. ಪರಮಾತ್ಮನ ಅತಿಶಯ ಅನಂತ ಗುಣಗಳು ಈ ರೂಪದಲ್ಲಿರುವುದರಿಂದ ಇದು ಧ್ಯಾನಾರ್ಹವಾಗಿದೆ.

ವ್ಯೂಹದಲ್ಲಿ ಪ್ರಧಾನವಾಗಿ ನಾಲ್ಕುರೂಪಗಳಿವೆ. ಬಲ, ಜ್ಞಾನ, ಐಶ್ವರ್ಯ, ವಿದ್ಯೆ, ಶಕ್ತಿ,

ಶ್ರೀ ಡಿ. ಕೃಷ್ಣ ಅಯ್ಯಂಗಾರ್



ತೇಜಸ್ಸೆಂಬ ಗುಣಹೊಂದಿರುವ ಪರವಾಸುದೇವ ರೂಪ. ಇದು ನಿತ್ಯ ಮುಕ್ತರಿಂದ ಮಾತ್ರ ಆರಾಧಿಸಲ್ಪಡುತ್ತದೆ. ಬಲ, ಜ್ಞಾನ, ಪ್ರಧಾನಗುಣ ಹೊಂದಿರುವ ಸಂಕರ್ಷಣ ರೂಪ. ಇದರಿಂದ ಶಾಸ್ತ್ರ ಸೃಷ್ಟಿ ಮತ್ತು ಪ್ರಳಯ ಉಂಟಾಗುತ್ತವೆ. ಐಶ್ವರ್ಯ ಮತ್ತು ವಿದ್ಯಾ ಗುಣಪ್ರಧಾನನಾದ ಪ್ರದ್ಯುಮ್ನ ರೂಪದಿಂದ ಜಗತ್ತಿನ ಸೃಷ್ಟಿ ಮತ್ತು ಧರ್ಮ ಪರಿಪಾಲನೆಯಾಗುತ್ತದೆ. ಹೀಗೆ ಬೇರೆ ಬೇರೆ ಚೇತನರ ಗುಣಕ್ಕನುಗುಣವಾಗಿ ಅವರವರ ಧ್ಯಾನಕ್ಕನುಕೂಲವಾಗುವಂತೆ ಈ ರೂಪಗಳು ಇರುವುವು. ಪರಮಾತ್ಮನು ವ್ಯೂಹಗಳನ್ನು ತಾನಾಗಿಯೇ ಸಂಕಲ್ಪಿಸಿಕೊಂಡು ಧರಿಸುವನು.

**ವಿಭವ : —**

ಕ್ಷೀರಾಬ್ಧಿ ಎಂಬ ನ್ಯಾಯಾಸ್ಥಾನದಲ್ಲಿ ತೀರ್ಮಾನವಾದ ವಿಷಯವನ್ನು ಕಾರ್ಯರೂಪಕ್ಕೆ ತರುವುದಕ್ಕಾಗಿ ಪರಮಾತ್ಮನು ರಾಮಕೃಷ್ಣಾದಿ ಅವತಾರಗಳನ್ನು ಮಾಡಿ, ಹಿರಣ್ಯಕಶಿಪು, ರಾವಣ, ಕುಂಭಕರ್ಣ, ಶಿಶುಪಾಲಾದಿ ದುಷ್ಟರನ್ನು ನಿಗ್ರಹಿಸುವುದಕ್ಕೂ, ಭಕ್ತಾಗ್ರೇಸರರಾದ ಸಾತ್ತ್ವಿಕ ಶಿರೋಮಣಿಗಳನ್ನು ಸಲಹುವುದಕ್ಕೂ ವಿಭವಾವತಾರ ಮಾಡಿದನು. ಇಂತಹ ಅವತಾರ

ಎಲ್ಲಯುಗಗಳನ್ನು, ಶ್ರೀಕೃಷ್ಣ ಪರಮಾತ್ಮನು ಭಗವದ್ಗೀತೆಯಲ್ಲಿ ವಿವರಿಸಿದ್ದಾನೆ.

ಯದಾ ಯದಾ ಹಿ ಧರ್ಮಸ್ಯ
ಗ್ಲಾನಿರ್ಭವತಿ ಭಾರತ।
ಅಭ್ಯುತ್ಥಾನಮಧರ್ಮಸ್ಯ
ತದಾತ್ಮಾನಂ ಸೃಜಾಮ್ಯಹಂ॥
ಪರಿತ್ರಾಣಾಯ ಸಾಧೂನಾಂ
ವಿನಾಶಾಯ ಚ ದುಷ್ಕೃತಾಂ।
ಧರ್ಮ ಸಂಸ್ಥಾಪನಾರ್ಥಾಯ
ಸಂಭವಾಮಿ ಯುಗೇ ಯುಗೇ॥

ವಿಭವರೂಪ ಸತ್ಯ: ಈ ರೂಪ ತ್ರಿಗುಣಾತ್ಮಕವಾದುದಲ್ಲ. ಶುದ್ಧ ಸತ್ತ್ವವಾದ ರೂಪ. ಪರಮಾತ್ಮನ ಸಂಕಲ್ಪದಿಂದ ಆದುದು. ಇಂತಹ ಅವತಾರ ಕಾಲದಲ್ಲಿ ಪರಮಾತ್ಮನು ತನ್ನ ಭಕ್ತರೊಡನೆ ಇದ್ದು ಅವರು ಮಾನವತ್ವದಿಂದ ದೇವತ್ವದ ಕಡೆಗೆ ಹೋಗುವಂತೆ ಮಾಡುವನು. ಜಗತ್ತಿನಲ್ಲಿ ನೀತಿನಿಯಮ ಪಾಲನೆಗಾಗಿ, ವೇದಸಂಸ್ಕೃತಿ ಪ್ರಚಾರಕ್ಕಾಗಿ, ಚೇತನರು ಮೋಕ್ಷಪಡೆಯುವ ಅವಕಾಶ ಕಲ್ಪಿಸುವುದಕ್ಕಾಗಿ ಈ ವಿಭವರೂಪವನ್ನು ಸ್ವಾಮಿಯು ವಹಿಸುತ್ತಾನೆ.

"ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ। ಈಶಾವಾಸ್ಯಮಿದಂ ಸರ್ವಂ" ಎಂಬ ಶ್ರುತಿವಾಕ್ಯದಂತೆ, ಪರಮಾತ್ಮನು ಸರ್ವವ್ಯಾಪಿಯಾಗಿದ್ದಾನೆ. ಈ ಅವತಾರ ಕಾಲದಲ್ಲಿ ಪರಮಾತ್ಮನು ವೈಕುಂಠದಲ್ಲಿ ಇಲ್ಲ ಎಂದು ಅರ್ಥ ಮಾಡಬಾರದು. ಈ ಅವತಾರಗಳು ಧಾರ್ಮಿಕವೂ, ಪಾರಮಾರ್ಥಿಕವೂ ಆಗಿವೆ.

ಅಂತರ್ಯಾಮಿ ರೂಪ :

ಎಲ್ಲ ಚೇತನರ ಹೃದಯದಲ್ಲಿ ಪರಮಾತ್ಮನು ಅಂತರ್ಗತನಾಗಿರುವನು. ಚೇತನರ ಸದ್ಭಾವ, ದುರ್ಭಾವಗಳನ್ನು ಕಂಡುಹಿಡಿಯುವುದಕ್ಕಾಗಿ, ಕಣ್ಣಿಗೆ ಕಾಣಿಸದೆ ಪ್ರಚ್ಛನ್ನರೂಪದಲ್ಲಿ ಎಲ್ಲರ ಹೃದಯದಲ್ಲಿ ಸ್ವಾಮಿ ಇರುವನು. ಎಲ್ಲಿಯೋ ಅಭುಕ್ತಮೂಲೆಯಲ್ಲಿರುವನು ಎಂದು ತಿಳಿಯಬಾರದು. ಯಾರು ಅವನನ್ನು ಭಕ್ತಿಯಿಂದ ಭಜಿಸುವರೋ, ಧ್ಯಾನಿಸುವರೋ ಅವರಿಗೆ ಅವನು ಕಾಣಿಸಿಕೊಳ್ಳುವನು. ಯೋಗಿಗಳಿಗೆ ವಿಶೇಷ ರೀತಿಯಲ್ಲಿ ದರ್ಶನಕೊಡುವನು.

ಅರ್ಚಾರೂಪ :—

ಪರಮಾತ್ಮನು ಶ್ರಿಯಃಪತಿಯು, ಅವಾಪ್ತ ಸಮಸ್ತಕಾಮನು, ಪರಿಪೂರ್ಣನು, ಉಭಯ ವಿಭೂತಿನಾಯಕನು. ನಿತ್ಯತೃಪ್ತನು. ತನ್ನ ಸಮಸ್ತ ಪರಿವಾರದೊಡನೆ, ಪುಣ್ಯಕ್ಷೇತ್ರಗಳಲ್ಲಿ, ರಮಣೀಯ ಪ್ರದೇಶಗಳಲ್ಲಿ ಚೇತನೋದ್ಧಾರಕ್ಕಾಗಿ ದಯಮಾಡಿಸಿರಬೇಕೆಂದು ಸಂಕಲ್ಪ ಮಾಡಿ, ಸ್ವೀಕರಿಸಿರುವ ರೂಪವೇ ಅರ್ಚಾರೂಪ.

ಪರಮಾತ್ಮನ ವಿಭವ ರೂಪವು, ರಾಮಕೃಷ್ಣಾದಿ ಅವತಾರಮಾಡಿ ಕೆಲವುಕಾಲ ಭೂಮಂಡಲದಲ್ಲಿದ್ದು ಅನಂತರ ಕಣ್ಮರೆಯಾದುವು. ಅನಂತರ ಬಂದ ಮಾನವರಿಗೆ ಇದರಿಂದ ಸಮಾಧಾನವಾಗಲಿಲ್ಲ. ಆದರೆ ಅರ್ಚಾವತಾರವು ಶಾಶ್ವತವಾದುದು. ಎಲ್ಲ ಕಾಲದಲ್ಲಿ ಪರಮಾತ್ಮನ ದರ್ಶನ ಪಡೆಯಬಹುದು. ಅರ್ಚಾರೂಪದಲ್ಲಿ ಪರಮಾತನ ಸಾನ್ನಿಧ್ಯವಿರುವುದು.

ಅರ್ಚಾರೂಪವು ಇತರ ರೂಪಗಳಿಗಿಂತ ಭಕ್ತರಿಗೆ ಹೆಚ್ಚು ಆಕರ್ಷಯುತವೂ, ಪ್ರಯೋಜನಕಾರಿಯೂ ಆಗಿದೆ. ಇಹ ಸೌಖ್ಯಕ್ಕೆ ಪ್ರಾಧಾನ್ಯತೆ ಕೊಡುವ ಮಾನವರನ್ನು ಆಕರ್ಷಿಸುವುದಕ್ಕೆ ಇಲ್ಲಿ ಅವಕಾಶವಿದೆ. ಪರಮಾತ್ಮನ ದಿವ್ಯಮಂಗಳ ವಿಗ್ರಹವನ್ನು ಸುಂದರವಾಗಿ ಅಲಂಕರಿಸಿ, ಪೂಜಿಸಿ ಇಲ್ಲಿ ಧ್ಯಾನಮಾಡಬಹುದು.

ಅರ್ಚಾರೂಪದ ಆರಾಧನಾವಿಧಿಯನ್ನು ಗೀತೆಯು ತಿಳಿಸುತ್ತದೆ. ಇದಕ್ಕಾಗಿ ಆಗಮ ವಿಧಿಗಳು ಏರ್ಪಟ್ಟಿವೆ. ಪರಮಾತ್ಮನ ಪರಿಪೂರ್ಣತೆಯನ್ನು ಭಕ್ತನು ತಿಳಿದು, ದುಃಖಪೂರಿತ ಜಗತ್ತನ್ನು ಸ್ವಲ್ಪಕಾಲ ಮರೆತು, ಅಶಾಶ್ವತವಾದ ತನ್ನ ಮತ್ತು ಶಾಶ್ವತನಾದ ಪರಮಾತ್ಮನ ಸಹಭಾಗಿತ್ವವನ್ನೂ ಆನಂದವನ್ನೂ, ಅನುಭವಿಸುವನು. ಪರಮಾತ್ಮನ ಆರಾಧನಾವಿಧಾನವು ಪರಲೋಕದ ನಿತ್ಯ ಮುಕ್ತರ ಪರಮಾತ್ಮ ಕೈಂಕರ್ಯಕ್ಕಿಂತ ಕಡಮೆ ಯಾದುದಲ್ಲವೆಂದು ತಿಳಿಸಲಾಗಿದೆ. ಇಂತಹ ಪಾರಮಾರ್ಥಿಕ ಜೀವನವು ಸಾರ್ಥಕವಾಗಿರುವುದಲ್ಲದೆ, ಮುಕ್ತಿದಾಯಕವೂ ಆಗಿದೆ.

ವೇದಾಂತದೇಶಿಕರು ಅರ್ಚಾರೂಪದ ಮಹಿಮೆಯನ್ನು ಬಹು ಚೆನ್ನಾಗಿ ವಿವರಿಸಿದ್ದಾರೆ.

ತ್ವಂ ಚೇತ್ಪ್ರಸೀದಸಿ ತವಾಸ್ಮಿ
ಸಮೀಪತಶ್ಚೇತ್ ।
ತ್ವಯ್ಯಸ್ತಿ ಭಕ್ತಿರನಘಾ
ಕರಿಶೈಲನಾಥ॥
ಸಂ ಸೃಜ್ಯತೇ ಯದಿ ಚ
ದಾಸಜನಸ್ತ್ವದೀಯಃ।
ಸಂಸಾರ ಏಷ ಭಗವನ್ನ
ಪವರ್ಗ ಏವ॥

ಹೇ! ಹಸ್ತೀಶನೇ, ನೀನು ಸದಾ ನನ್ನ ಹತ್ತಿರ ಇರುವುದಾದರೆ, ನಾನು ಪರಿಶುದ್ಧನಾಗುವೆನು. ನಿನ್ನ ಆರಾಧನೆಯಲ್ಲಿ ನಿರತನಾಗಿರುವೆನು. ನಿನ್ನ ಭಕ್ತರ ಸಹವಾಸದಲ್ಲಿರುವೆನು. ಇಂತಹ ಪರಿಸ್ಥಿತಿಯಲ್ಲಿ ನನಗೆ ಇಲ್ಲಿಯೇ ಮುಕ್ತಿದೊರೆತಂತಾಗುವುದು. ಭಕ್ತರ ಅಭೀಷ್ಟವು ಪವಿತ್ರವಾದ, ಆಕರ್ಷಯುತವಾದ, ಅರ್ಚಾರೂಪದ ಅನುಪಮ ಸೌಂದರ್ಯವನ್ನು ಸದಾ ನೋಡುವುದೇ ಅಲ್ಲವೇ? ಇದು ವಿನಹ, ಭಕ್ತನಿಗೆ ಇನ್ನಾವ ಪ್ರತ್ಯಾಶೆಯೂ ಇರುವುದಿಲ್ಲ.

ನಿರಂತರಂ ನಿರ್ವಿಶ ತ್ವದೀಯ
ಮಸ್ಪೃಷ್ಟ ಚಿಂತಾಪದಮಾಭಿರೂಪ್ಯಂ।
ಸತ್ಯಂ ಶಪೇ ವಾರಣ ಶೈಲನಾಥ
ವೈಕುಂಠವಾಸೇಽಪಿ ನ ಮೇಽಭಿಲಾಷಃ॥

ಅರ್ಚಾರೂಪವು ಸಮಸ್ತ ಚೇತನ ವರ್ಗಕ್ಕೂ ಉಪಾಸ್ಯವಾಗಿಯೂ ಮತ್ತು ಪ್ರಾಪ್ಯವಾಗಿಯೂ ಇದೆ ಎಂಬ ಅಂಶವನ್ನು ಶ್ರುತಿಗಳು ಸ್ಪಷ್ಟಪಡಿಸಿವೆ. ಇಂತಹ ಶ್ರುತಿತಾತ್ಪರ್ಯವನ್ನು ಶೌನಕ ಋಷಿಗಳು ಲೋಕಹಿತ ದೃಷ್ಟಿಯಿಂದ ಸಂಗ್ರಹಿಸಿದ್ದಾರೆ.

(35ನೇ ಪುಟ ನೋಡಿ)

# ಶ್ರೀನಿವಾಸ ವೈಭವ

ತಿರುಪತಿ ಇಡೀ ಜಗತ್ತಿನಲ್ಲಿ ಹೆಸರಾಂತ ಪುಣ್ಯಕ್ಷೇತ್ರ. ಇದಕ್ಕೆ ಕಾರಣ-ಶ್ರೀನಿವಾಸನ ಕಮನೀಯ ಸೌಂದರ್ಯ-ಶೇಷಾದ್ರಿವಾಸನ ವಾತ್ಸಲ್ಯ-ಶ್ರೀ ವೆಂಕಟೇಶ್ವರನ ಮಹಿಮೆ. ಕನ್ನಡ–ತಮಿಳು-ತೆಲುಗು - ಇಂಗ್ಲೀಷ್.... ಎಂಬ ಭಾಷಾಭೇದವಿಲ್ಲದೆ-ಭಾರತದ ಮೂಲೆ ಮೂಲೆಯಿಂದ - ಹೆಚ್ಚೇನು - ಜಗತ್ತಿನ ನಾನಾಭಾಗಗಳಿಂದ ಭಕ್ತವೃಂದ ಲಕ್ಷಲಕ್ಷ ಸಂಖ್ಯೆಯಲ್ಲಿ ಇಲ್ಲಿಗೆ ಬಂದು, ಸ್ವಾಮಿ ಪುಷ್ಕರಿಣಿಯಲ್ಲಿ ಮಿಂದು ಧನ್ಯರಾಗಿ, ಶ್ರೀನಿವಾಸನ ರಮ್ಯರಮಣೀಯ ವೈಭವವನ್ನು ಕಂಡು ಧನ್ಯರಾಗಿ – ಮುಡಿಪುಸಲ್ಲಿಸಿ – ತಂತಮ್ಮ ಇಷ್ಟಾರ್ಥಗಳನ್ನು ಹೊಂದಿ ಪದ್ಮಾರಾಧಿತ ಪಾದಪದ್ಮಗಳ ಹಿರಿಮೆಯನ್ನು ಮನಸಾ ಸ್ಮರಿಸುತ್ತ ಹಿಗ್ಗುತ್ತಾರೆ. ಕನ್ನಡ ದಾಸಸಾಹಿತ್ಯದಲ್ಲಿ ದಿಗ್ಗಜಗಳಂತಹ ಅನೇಕ ವಾಗ್ಗೇಯಕಾರರು ಶ್ರೀನಿವಾಸನ ದರ್ಶನಕ್ಕಾಗಿ ತಿರುಪತಿಗೆ ಬಂದಿದ್ದಾರೆ. ತಮ್ಮ ಸಂಗೀತ ಕೀರ್ತನೆಗಳಲ್ಲಿ ಸ್ವಾಮಿಯನ್ನು ಕೊಂಡಾಡಿದ್ದಾರೆ. ಪದಕವಿತಾ ಪಿತಾಮಹನೆಂದು ಕೀರ್ತಿತನಾದ ಅನ್ನಮಾಚಾರ್ಯನಂತೂ ಸ್ವಾಮಿಯನ್ನು ಕುರಿತು ಸಹಸ್ರಾರು ಕೀರ್ತನೆಗಳನ್ನೇ ರಚಿಸಿದ್ದಾನೆ. ಸ್ವಾಮಿಯ ಶ್ರೀಪಾದವೈಭವವನ್ನು ಬಗೆಬಗೆಯಲ್ಲಿ ಬಣ್ಣಿಸಿದ್ದಾನೆ.

ನಮ್ಮ ದೇಶದಲ್ಲಿ ಬಳಕೆಯಲ್ಲಿರುವ ಸಂಗೀತದಲ್ಲಿ ಭಕ್ತಿ, ಜ್ಞಾನ ವೈರಾಗ್ಯ, ಸ್ವಾಮಿಯನ್ನು ಬಗಬಗೆಯಾಗಿ ಬೇಡಿಕೊಳ್ಳುವ ಆರ್ದ್ರತೆ, ದೇವದೇವನ ಮಹಿಮಾಗಾನ–ಇವು ಮುಪ್ಪುರಿಗೊಂಡಂತೆ ಸೇರಿಕೊಂಡಿರುತ್ತದೆ. ಸಾಧಾರಣವಾಗಿ ತಿರುವೆಂಕಟಾಧೀಶನ ದರ್ಶನಾರ್ಥಿಗಳು ಯಾರೇ ಆದರೂ – ಹರಕೆ ಸಲ್ಲಿಸುವ ಉದ್ದೇಶದಿಂದ-ಹೋಗುವುದು ವಾಡಿಕೆ. ಬೆಟ್ಟವನ್ನು ಕಂಡ ಕೂಡಲೇ ಕೈಮುಗಿಯಬೇಕೆಂಬ ಭಾವಾವೇಶ ಜನರ ಮನಸ್ಸಿನಲ್ಲಿ ಮೂಡಿಬರುವುದು ಸಹಜ. ಏಕೆಂದರೆ ಅದು ಕೇವಲ ಬೆಟ್ಟವಲ್ಲ. ಸ್ವಾಮಿಯ ಪಾದಧೂಳಿಯಿಂದ ಪುನೀತವಾದ ಪ್ರದೇಶ; ಸ್ವಾಮಿನೆಲೆಸಿರುವ ಪ್ರದೇಶ. ಶ್ರೀನಿವಾಸ-ವೇಂಕಟೇಶ, ಶೇಷಾದ್ರಿಶೇಖರ. ಇತ್ಯಾದಿ ಯಾವುದೇ ಹೆಸರಿಂದ ಕರೆದರೂ ಸ್ವಾಮಿಗೆ ನಮ್ಮ ನೊರೆ ತಲುಪುತ್ತದೆ. ಗೋವಿಂದ - ಗೋವಿಂದವೆಂಬ ನಾಮಸ್ಮರಣೆ – ಜಯಘೋಷ ತಿರುಮಲೆ ತಿರುಪತಿಯ ವಾತಾವರಣದಲ್ಲೊಂದಾಗಿ ಅನುರಣಿಸುತ್ತಿರುತ್ತದೆ.

ಶ್ರೀನಿವಾಸದೇವರಿಗೆ ದೇವಾಲಯದಲ್ಲಿ ನಡೆಯುವ ಪ್ರತಿಯೊಂದು ಸೇವೆಯೂ, ಪ್ರತಿಯೊಂದು ಅಲಂಕಾರವೂ ವೈಭವವೇ–ಆಕರ್ಷಣೀಯವೇ. ಸ್ವಾಮಿಗೆ ಎಷ್ಟೆಷ್ಟು ಬಗೆಯಲ್ಲಿ ಅಲಂಕಾರಮಾಡಿದರೂ–ಸಮಾಧಾನವಾಗುವುದಿಲ್ಲ – ತೃಪ್ತಿಯಾಗುವುದಿಲ್ಲ. ಸೌಂದರ್ಯಮೂರ್ತಿಯಾದ ಶ್ರೀಹರಿಗೆ–ಶ್ರೀನಿವಾಸನಿಗೆ– ಬ್ರಹ್ಮರಥೋತ್ಸವ ಸೇವೆಯಂತೂ–ಅತ್ಯಂತ ಮನೋಜ್ಞವಾಗಿರುವುದು. ಬ್ರಹ್ಮರಥೋತ್ಸವವೆಂದಾಗ ಒಂದು ಘಟನೆ ನೆನಪಾಗುತ್ತದೆ. ಅದನ್ನಿಲ್ಲಿ ಉಲ್ಲೇಖಿಸುವುದು ತಪ್ಪಾಗಲಾರದು.



ಅನೇಕ ಸಂಗೀತ ಕೃತಿಗಳನ್ನು ರಚಿಸಿದ ಪ್ರಸಿದ್ಧ ವಾಗ್ಗೇಯಕಾರರಾದ ಶ್ರೀ ವಾಸುದೇವಾಚಾರ್ಯರು ಮದ್ರಾಸಿನಲ್ಲಿದ್ದರು. ಸುಪ್ರಸಿದ್ಧ ಕಲಾವಿದೆಯಾದ ಶ್ರೀಮತಿ ರುಕ್ಮಿಣೀದೇವಿ ಅರುಂಡೇಲ್‌ರವರು – ಕಲಾಕ್ಷೇತ್ರದಲ್ಲಿ – ಒಂದು ದೊಡ್ಡ ಕೆಲಸಕ್ಕಾಗಿ ಆಚಾರ್ಯರನ್ನು ಮದ್ರಾಸಿನಲ್ಲಿರಿಸಿಕೊಂಡಿದ್ದರು. ಶ್ರೀಮದ್ವಾಲ್ಮೀಕಿ ರಾಮಾಯಣದ ಆಧಾರದಮೇಲೆ ಕೆಲವು ಗೀತನಾಟಕಗಳನ್ನು ರಚಿಸಬೇಕಾಗಿತ್ತು. ಆದಿಕಾವ್ಯದ ಪರಮಭಕ್ತರೂ ಸಂಗೀತ ಶಾಸ್ತ್ರರತ್ನರೂ ಆಗಿದ್ದ ಆಚಾರ್ಯರು ಈ ಕಾರ್ಯವನ್ನು ತುಂಬ ಶ್ರದ್ಧೆಯಿಂದ ನಿರ್ವಹಿಸುತ್ತಿದ್ದರು. ಬಾಲಕಾಂಡದ ಆಧಾರದ ಮೇಲೆ–ಸೀತಾಕಲ್ಯಾಣ– ಗೀತನಾಟಕ ರಚನೆ ಸಿದ್ಧವಾಯಿತು. ಇದರ ಪ್ರಥಮ ಪ್ರಯೋಗವನ್ನು ಬಹಳ ವೈಭವವಾಗಿ ವ್ಯವಸ್ಥೆ ಮಾಡಬೇಕೆಂದು ರುಕ್ಮಿಣೀದೇವಿಯವರ ಅಭಿಪ್ರಾಯ. ಆಗ್ಗೆ ಭಾರತದ ಪ್ರಧಾನ ಮಂತ್ರಿಗಳಾಗಿದ್ದ ಪಂಡಿತ ಜವಹರಲಾಲ್ ನೆಹರೂರವರನ್ನು ಈ ಸಮಾರಂಭಕ್ಕೆ ಆಹ್ವಾನಿಸಬೇಕೆಂದೂ ಆಕೆಗೆ ಯೋಜನೆ ಇತ್ತು. ಈ ಬಗ್ಗೆ ಆಚಾರ್ಯರಲ್ಲಿ ಪ್ರಸ್ತಾಪ ಮಾಡಿದಾಗ ಅದರ ಅಭಿಪ್ರಾಯವೇ ಬೇರೆ

---

**ವಿದ್ವಾನ್ ಬ. ನ. ಗುಂಡೂರಾವ್**

---

... ತಿರುಪತಿ ಶ್ರೀನಿವಾಸ ದೇವರ ಸನ್ನಿಧಿಯಲ್ಲಿ ರಾಮಾಯಣಗೀತ ನಾಟಕದ ಪ್ರಥಮ ಪ್ರಯೋಗವಾದರೆ ಚೆನ್ನ ವೆಂದು ವಾಗ್ಗೇಯಕಾರರ ಬಯಕೆ. ಆಚಾರ್ಯರ ಕೋರಿಕೆಯನ್ನು ರುಕ್ಮಿಣೀದೇವಿ ತುಂಬ ಹರ್ಷಪಟ್ಟು – ತಮ್ಮ ಮಿತ್ರ ವೃಂದಕ್ಕೆ ತಿಳಿಸಿದಾಗ ಎಲ್ಲರೂ ಸಂತೋಷ ಪಟ್ಟರು. ತಿರುಪತಿ ಬೆಟ್ಟದ ಮೇಲೆ ಈ ಮಂಗಳ ಮಹೋತ್ಸವಕ್ಕೆ ಬೇಕಾದ ಏರ್ಪಾಟುಗಳು ಭರದಿಂದ ಸಾಗಿದವು.

ಪಾತ್ರಧಾರಿಗಳ ಗುಂಪಿನೊಡನೆ ಸಂಬಂಧ ಪಟ್ಟವರೆಲ್ಲರೂ ತಿರುಪತಿಗೆ ಪಯಣ ಬೆಳೆಸಿದರು. ಮದ್ರಾಸ್ ನ್ಯಾಯಾಲಯದ ಅನೇಕ ವಕೀಲರು, ನ್ಯಾಯಮೂರ್ತಿಗಳು ಶ್ರೀಮತಿ ಎಂ. ಎಸ್. ಸುಬ್ಬುಲಕ್ಷ್ಮಿ, ದ್ವಾರಂ ವೆಂಕಟಸ್ವಾಮಿನಾಯುಡು, ಚಕ್ರವರ್ತಿ ರಾಜಗೋಪಾಲಾಚಾರಿ...... ಮುಂತಾದ ಗಣ್ಯರೆಲ್ಲರೂ ಹೊರಟರು.

ಭವ್ಯರಂಗಮಂಟಪ ದಿವ್ಯಾಲಂಕೃತ ವಾಗಿದೆ. ಗಣ್ಯರೆಲ್ಲರೂ ಸಮುಚಿತಸ್ಥಾನ ಗಳಲ್ಲಿ ಆಸೀನರಾಗಿದ್ದಾರೆ. ವೇದಿಕೆಯಮೇಲೆ ಝಗಝಗಿಸುವ ದೀಪಾಲಂಕಾರ. ಶ್ರೀ ವಾಸುದೇವಾಚಾರ್ಯರು ಸ್ವಯಂ ಆದಿ ಕಾವ್ಯದ ಗೀತನಾಟಕದ ಶ್ಲೋಕಗಳನ್ನು ಹಾಡಲು ಕೂತಿದ್ದಾರೆ. ರಘುವಂಶದ ನಾಲ್ವರು ಅಣ್ಣತಮ್ಮಂದಿರು, ನಿಮಿವಂಶದ ನಾಲ್ಕು ಅಕ್ಕತಂಗಿಯರು–ವಧೂ–ವರರಾಗಿ ನೇಪಥ್ಯದಲ್ಲಿ ಸಿದ್ಧವಾಗುತ್ತಿದ್ದಾರೆ. ಜನಕ ದಶರಥ, ವಿಶ್ವಾಮಿತ್ರ, ವಸಿಷ್ಠ ...ಮುಂತಾದವರೆಲ್ಲ ತಂತಮ್ಮ ಪಾತ್ರಾಲಂಕಾರದ ಸಿದ್ಧತೆಯಲ್ಲಿದ್ದಾರೆ. ಮಂಗಳವಾದ್ಯದ ಮಧುರಮಂಜುಳ ನಾದಲಹರಿ ವಾತಾವರಣದ ವೈಭವವನ್ನು ಇಮ್ಮಡಿಗೊಳಿಸುತ್ತಿದೆ. ಕಲಾಕ್ಷೇತ್ರದವರು ನಡೆಸುವ ಕಲಾತ್ಮಕ ಗೀತನಾಟಕದ ಪ್ರಥಮ ಪ್ರಯೋಗದ ಪೂರ್ವಸಿದ್ಧತೆಗಳೆಲ್ಲ–ಉತ್ತಮೋತ್ತಮ ಕಲಾವಿದೆಯಾದ-ರುಕ್ಮಿಣೀದೇವಿಯವರ ನೇತೃತ್ವದಲ್ಲಿ ವೈಭವವಾಗಿ ನಡೆದಿವೆ. ಬಂಗಾರದ ಬಣ್ಣದ ಪರದೆ ಯಾವಾಗ ಸರಿಯುತ್ತದೋ...ಎಂದು ಪ್ರೇಕ್ಷಕವೃಂದ ಕುತೂಹಲದಿಂದ ಕೂತಿದೆ.

ಅಷ್ಟರಲ್ಲ ಪರದ ಸರಿಯಿತು, ನಾಟಕ ಪ್ರಾರಂಭವಾಯ್ತು. ಶ್ರೀಮದ್ರಾಮಾಯಣದ ಸುಂದರ ಸನ್ನಿವೇಶಗಳನ್ನು ಕಲಾವಿದರು ಸೊಗಸಾಗಿ ಅಭಿನಯಿಸುತ್ತಿದ್ದಾರೆ. ಪ್ರೇಕ್ಷಕರು ತಾವೆಲ್ಲ ಜನಕರಾಜನ ಮಿಥಿಲೆಯಲ್ಲಿ-ವಿವಾಹಮಂಟಪದಲ್ಲಿ ಕೂತಿರುವಂತೆ ಪರಮ ಸಂತೋಷಭರಿತರಾಗಿದ್ದಾರೆ. ಆಚಾರ್ಯರ ಗಾಯನವೈಖರಿ, ಆದಿಕವಿಯ ಹೃದಯ ಭಾವಗಳನ್ನು–ಬಿಡಿಸಿ ತೋರಿಸುವಂತಿದೆ. ಆದಿಕಾವ್ಯದ ಭಾವಗಾಂಭೀರ್ಯವನ್ನು–ಪವಿತ್ರ ಸೌಂದರ್ಯವನ್ನು ಕಣ್ಣಿಗೆ ಕಟ್ಟುವಂತೆ ಅಭಿನಯ ನಡೆಯುತ್ತಿದೆ.

ಸರ್ವಾಲಂಕೃತಕನ್ಯೆ ಸೀತಾದೇವಿಯನ್ನು ಜನಕಚಕ್ರವರ್ತಿ ರಘುರಾಮಚಂದ್ರನಿಗೆ ಧಾರೆಯೆರೆದು ಕೊಡಲು ಸಿದ್ಧವಾಗಿದ್ದಾನೆ. ಆ ಕಡೆ ರಾಜರ್ಷಿ ದಶರಥ, ವಸಿಷ್ಠ, ವಿಶ್ವಾಮಿತ್ರ, ಶತಾನಂದಾದಿ ಮಹರ್ಷಿಗಳು ಸೀತಾಕಲ್ಯಾಣ ಮಹೋತ್ಸವನ್ನು ಕಂಡು ಹರ್ಷಿಸುತ್ತಿದ್ದಾರೆ. ಈ ಸನ್ನಿವೇಶದಲ್ಲಿ ಆಚಾರ್ಯರು ಆದಿಕಾವ್ಯದ ಶ್ಲೋಕರತ್ನವನ್ನು ಹಾಡುತ್ತಿದ್ದಾರೆ.

ಇಯಂ ಸೀತಾ ಮಮ ಸುತಾ
ಸಹಧರ್ಮಚರೀ ತವ।
ಪತಿವ್ರತಾ ಮಹಾಭಾಗಾ
ಛಾಯೇವಾನುಗತಾ ಸದಾ ॥

ಪಾಣಿಂ ಗೃಹ್ಣೀಷ್ವ ಪಾಣಿನಾ- ಎಂಬ ಮಾತನ್ನೇ ಪಲ್ಲವಿ ಮಾಡಿಕೊಂಡು ಆಚಾರ್ಯರು ಹಾಡುತಿದ್ದಾರೆ–ತಾನೇ ಜನಕನೋ ಎಂಬ ಭಾವತನ್ಮಯತೆಯಿಂದ. ‹ಈಕೆ ನನ್ನಮಗಳು ನಿನ್ನ ಸಹಧರ್ಮಚಾರಿಣಿ ಪತಿವ್ರತೆ, ಮಹಾಭಾಗ್ಯವತಿ, ಕಷ್ಟಸುಖಗಳಲ್ಲಿ ನಿನ್ನನ್ನು ನೆರಳಿನಂತೆ ಅನುಸರಿಸುತ್ತಾಳೆ. ಈಕೆಯ ಪಾಣಿಗ್ರಹಣಮಾಡು’ ಎಂಬ ಅರ್ಥದ ಶ್ಲೋಕಗಳನ್ನು ಹಾಡುತ್ತಿರುವ ಆ ಮಧುರ ಮಂಗಳ ಭಾವಪೂರ್ಣ ಸನ್ನಿವೇಶ ಪ್ರೇಕ್ಷಕರ ಪುಲಕಿತಗೊಳಿಸಿದೆ. ಆಸಮಯಕ್ಕೆ ಸರಿಯಾಗಿ ಏನಾಯ್ತು ಗೊತ್ತೇ ?

ಶ್ರೀನಿವಾಸದೇವರು ಬ್ರಹ್ಮರಥದಲ್ಲಿ ಆಕಡೆ ಬಿಜಯ ಮಾಡಿಸಿದ್ದಾರೆ. ವೆಂಕಟೇಶ್ವರನ ಬ್ರಹ್ಮರಥೋತ್ಸವದ ವೈಭವ ನ ಭೂತೋ ನಭವಿಷ್ಯತಿ-ಎಂಬ ರೀತಿಯಲ್ಲಿದೆ. ಸೀತೆಯನ್ನೊಪ್ಪಿಸಿಕೊಳ್ಳಲು ರಾಮನೇ ಬಂದನೋ! ಆಚಾರ್ಯರ ಭಕ್ತಿ ಶ್ರದ್ಧೆಗಳನ್ನೊಪ್ಪಿಸಿಕೊಳ್ಳಲು ಶ್ರೀನಿವಾಸನೇ ಬಂದನೋ! ವಾಗ್ಗೇಯಕಾರಶಿರೋಮಣಿಯ ಗಾನಾಮೃತವನ್ನು ಕೇಳಲು ಶೇಷಾದ್ರಿನಿಲಯ ತಾನೇ ಬಂದನೊ! ಗೀತನಾಟಕದ ವೈಭವವನ್ನು ನೊಡಲು ಸ್ವಾಮಿ ತಾನೇ ಬಂದನೊ! ಸೀತೆಯನ್ನು ರಾಮನಿಗೆ ಸಮರ್ಪಿಸಿ ಅಂದಿನ ಜನಕನರೇಂದ್ರ ಧನ್ಯನಾದರೆ, ತಾವು ರಾಗಸಂಯೋಜನೆ ಮಾಡಿದ್ದ ಗೀತನಾಟಕ ಶ್ರೀನಿವಾಸನಿಗೆ ಸಮರ್ಪಿಸಿ ವಾಸುದೇವಾಚಾರ್ಯರು ಧನ್ಯರಾದರು! ಬ್ರಹ್ಮರಥೋತ್ಸವವನ್ನು ಕಂಡಕೂಡಲೆ ಆಚಾರ್ಯರು ಸಾಷ್ಟಾಂಗ ಪ್ರಣಾಮಮಾಡಿ, ‹ಕೃತಾರ್ಥನಾದೆ ಶ್ರೀನಿವಾಸ ಎಲ್ಲವೂನಿನ್ನಕೃಪೆ’ಯೆಂದು ಗದ್ಗದ ಕಂಠದಿಂದ ನುಡಿದರು. ‹ಪಾಣಿಂ ಗೃಹ್ಣೀಷ್ವ ಪಾಣಿನಾ’ ಎಂದಾಗ ಸ್ವಾಮಿಯ ರಥೋತ್ಸವ ಅಲ್ಲಿಗೆ ಬಂದದ್ದು ಕಾಕತಾಳೀಯ ನ್ಯಾಯವೇನಲ್ಲ. ಅದು ಸ್ವಾಮಿಯ ಸಂಕಲ್ಪ, ಭಕ್ತಜೀವಕ್ಕೆ ಇದಕ್ಕಿಂತ ಧನ್ಯತಮವಾದ ಮುಹೂರ್ತ ಬೇರೇನಿದೆ!

ಶ್ರೀನಿವಾಸನ ವೈಭವವೆಂದರೆ ಬೆರಗಾಗದವರಾರು ? ಯಶೋದೆಯ ಮುಂದೆ ಮಕ್ಕಳ ಮಾಣಿಕ್ಯವಾಗಿದ್ದದನೂ ಈತನೆ, ಗೋಪಕನ್ಯೆಯರ ಭಾಗ್ಯಸುಧಾನಿಧಿಯಾಗಿದ್ದದನೂ ಈತನೇ, ಆರ್ತಜನ ಸಂರಕ್ಷಕನೂ ಕರುಣಾಸಿಂಧುವೂ ಆಗಿದ್ದ ಶ್ರೀರಾಮನೂ ಈತನೆ, ಲೋಕರಕ್ಷಾಮಣಿ ಭುವನೈಕಸುಂದರ, ಅಹೈತುಕ ಕೃಪಾಜಲಧಿ, ಕಮಲಾಕುಚ ಚೂಚುಕ ಕುಂಕುಮಾಂಕಿತ ನೀಲಮಣಿ ವಿಗ್ರಹನೂ ಈತನೇ, ಕಲಿಯುಗದಲ್ಲೂ ಅನುಗ್ರಹಾಮೃತ ನೀಡುವ ಭಕ್ತಕಲ್ಪಭೂರುಹನೆನ್ನಿ ಕಾಮಿತಾರ್ಥ ಪ್ರದಾಯಕವಾದ ಕಾಮಧೇನುವೆನ್ನಿ! ಶ್ರೀನಿವಾಸನ ವೈಭವವೆ ವೈಭವ. ಅದು ದೇವವೈಭವ ಮಹಿಮಾವೈಭವ!

ಈ ಪರಿಯ ಸೊಬಗಿನ್ನಾವ ದೇವರೊಳು ಕಾಣೆ

## ಭಾರತದಲ್ಲಿ ಕಥಾಸಾಹಿತ್ಯ

ಕಥೆಯನ್ನು ಹೇಳುವುದೂ, ಕಥೆಯನ್ನು ಕೇಳುವುದೂ ಮನುಷ್ಯನ ನಾಗರಿಕತೆಯಷ್ಟೇ ಪ್ರಾಚೀನವಾದುದು. ಆದುದರಿಂದಲೇ ಪ್ರತಿಯೊಂದು ದೇಶವೂ ತನಗೇ ಪ್ರತ್ಯೇಕವಾದ ಕಥಾರಾಶಿಗಳನ್ನು ಹೊಂದಿರುತ್ತದೆ. ಬೇರೆ ಬೇರೆ ದೇಶದ ಜನಗಳಿಗೆಲ್ಲ ಪರಸ್ಪರ ಸಂಬಂಧವುಂಟಾದ ಹಾಗೆಲ್ಲ ಅವು ದೇಶದಿಂದ ದೇಶಕ್ಕೆ ಹರಡಿ ಅಲ್ಲಿಯ ಸನ್ನಿವೇಶಕ್ಕನುಗುಣವಾಗಿ ಮಾರ್ಪಾಟಾಗಿ ಅಲ್ಲಿಯ ಜನಜೀವನದಲ್ಲಿ ಹಾಸುಹೊಕ್ಕಾಗಿ ಸೇರಿಕೊಳ್ಳುತ್ತವೆ. ಹಾಗೆಯೇ ಭಾರತದಲ್ಲಿಯೂ ಬಹಳ ಪ್ರಾಚೀನಕಾಲದಿಂದ ಜಾನಪದ ಕಥೆಗಳು ಪ್ರಸಿದ್ಧವಾಗಿವೆ. ಅವು ಸಾಮಾನ್ಯವಾಗಿ ಸಮುದ್ರಯಾನವೇ ಮೊದಲಾದ ಅದ್ಭುತ ಮತ್ತು ರೋಮಾಂಚನಕಾರಿಯಾದ ವಿಷಯಗಳನ್ನೊಳಗೊಂಡಿರುತ್ತವೆ. ದೈವಾಂಶ ಸಂಭೂತರಾದ ಯಕ್ಷ ಗಂಧರ್ವ ವಿದ್ಯಾಧರರ ಅದ್ಭುತ ಕೃತ್ಯಗಳು ಅವುಗಳ ವಸ್ತುವಾಗಿರುತ್ತವೆ.

ಈ ಕಥೆಗಳ ರಚನೆಯು ಕಾಲದಲ್ಲಿ ತತ್ತತ್ಕಾಲ ಪ್ರಚಲಿತ ಧರ್ಮಗಳು ಅವುಗಳ ಮೇಲೆ ವಿಶೇಷ ಪ್ರಭಾವವನ್ನು ಬೀರಿರುವಂತೆ ಕಾಣುತ್ತವೆ. ಜೈನಬೌದ್ಧರು ತಮ್ಮ ಧರ್ಮ ಪ್ರಚಾರಕ್ಕೆ ಇಂತಹ ಕಥೆಗಳನ್ನು ವಿಶೇಷವಾಗಿ ಉಪಯೋಗಿಸಿಕೊಂಡಿದ್ದಾರೆ. ಇವು ವಿಶೇಷವಾಗಿ ಸಾಮಾನ್ಯ ಜನರಿಗೆ ಪ್ರಿಯವಾಗಿದ್ದು ಅವರಲ್ಲಿ ಬಳಕೆಯಿದ್ದ ಪ್ರಾಕೃತ ಭಾಷೆಯಲ್ಲಿಯೇ ರಚಿತವಾಗಿದ್ದಿರಬೇಕು.

ಗುಣಾಢ್ಯನ 'ಬೃಹತ್ಕಥೆ'ಯು ಇಂತಹವುಗಳಲ್ಲಿ ಮೊದಲನೆಯದು. ಇದು ರಾಮಾಯಣ ಮಹಾಭಾರತಗಳಷ್ಟೇ ಜನಪ್ರಿಯವಾಗಿ ಮುಂದಿನ ಕವಿಗಳನೇಕರಿಗೆ ವಸ್ತುವನ್ನು ಒದಗಿಸಿದೆ. ಇದು ಪೈಶಾಚೀ ಭಾಷೆಯಲ್ಲಿ ರಚಿತವಾಗಿದೆ. ಇದು ಈಗ ಉಪಲಬ್ಧವಲ್ಲ. ಆದುದರಿಂದ ಅದರ ಮೂಲರೂಪವನ್ನು ತಿಳಿಯುವ ಹಾಗಿಲ್ಲ. ಇದರ ಸಂಗ್ರಹಗಳಿಂದ ಇದರ ಸ್ವರೂಪವನ್ನು ತಿಳಿಯಬೇಕಾಗಿದೆ. ಬೃಹತ್ಕಥೆಯ ಸಂಗ್ರಹಗಳಲ್ಲಿ ನೇಪಾಳದೇಶದ ಬುದ್ಧಸ್ವಾಮಿಯ 'ಶ್ಲೋಕಸಂಗ್ರಹ' ಅಥವಾ 'ಬೃಹತ್ಕಥಾ ಶ್ಲೋಕಸಂಗ್ರಹ'ವೆ ಪರಮಪ್ರಾಚೀನವಾದುದು. ಇದು ೮-೯ನೆಯ ಶತಮಾನದಲ್ಲಿ ರಚಿತವಾಗಿರಬೇಕು. ಎರಡನೆಯ ಸಂಗ್ರಹವು ಕ್ರಿ ಶ ೧೦೩೭ ರಲ್ಲಿ ಕ್ಷೇಮೇಂದ್ರನಿಂದ ಸಿದ್ಧವಾಯಿತು. ಕಾಶ್ಮೀರದ ಸೋಮದೇವನು ಕ್ರಿ ಶ ೧೦೬೩ ರಲ್ಲಿ 'ಬೃಹತ್ಕಥಾಸರಿತ್ಸಾಗರ' ಅಥವಾ 'ಕಥಾಸರಿತ್ಸಾಗರ' ಎಂಬ ಮೂರನೆಯ ಸಂಗ್ರಹವನ್ನು ರಚಿಸಿದನು. ಬೃಹತ್ಕಥೆಯಂತೆಯೇ ವಿಶೇಷ ಜನಪ್ರಿಯವಾದುವು ಜೈನರ ಅವದಾನ ಕಥೆಗಳು. ಜೈನರ ಸಾಹಸ ಕೃತ್ಯಗಳನ್ನು ವರ್ಣಿಸುವುದು ಇವುಗಳ ಉದ್ದೇಶ. 'ಅವದಾನಶತಕ' 'ದಿವ್ಯಾವದಾನ', 'ಅವದಾನ ಕಲ್ಪಲತಾ' 'ವ್ರತಾವದಾನಮಾಲಾ, 'ಭದ್ರ ಕಲ್ಪಾವದಾನ' 'ದ್ವಾವಿಂಶತ್ಯವದಾನ – ಮೊದಲಾದುವು ಈ ಜಾತಿಗೆ ಸೇರಿದವು. ಇಂತಹುದೇ ಆರ್ಯಶೂರನಿಂದ ರಚಿತವಾದ 'ಜಾತಕಮಾಲೆ' ಇದರಲ್ಲಿ ಬೋಧಿಸತ್ವನ ಪೂರ್ವಜನ್ಮಗಳಿಗೆ ಸಂಬಂಧಪಟ್ಟ ಕಥೆಗಳು ಉಕ್ತವಾಗಿವೆ. ಇದು ಉಪಾಖ್ಯಾನ ಅಥವಾ ಕಲ್ಪಿತ ಕಥೆಗಳ ಸಂಗ್ರಹ. ಸುಮಾರು ಕ್ರಿ ಶ ೪೦೦ ರಲ್ಲಿ ರಚಿತವಾಗಿರಬೇಕು. ಬೇತಾಳ ಪಂಚವಿಂಶತಿ ಮತ್ತೊಂದು ಜನಪ್ರಿಯವಾದ ಕಥಾಸಂಗ್ರಹ. ಈ ಕಥೆಗಳು, ಬೃಹತ್ಕಥಾಮಂಜರಿ. ಮತ್ತು ಕಥಾಸರಿತ್ಸಾಗರಗಳಲ್ಲಿಯೂ ಸಿಕ್ಕುತ್ತವೆ. ಇದರಲ್ಲಿ ವಿಕ್ರಮಾದಿತ್ಯನ ಪೌರುಷವನ್ನು ಕುರಿತ ೩೨ ಕಥೆಗಳಿವೆ, ಇವನ್ನು ಸಿಂಹಾಸನದ ಬೊಂಬೆಗಳು ಭೋಜರಾಜನಿಗೆ ತಿಳಿಸಿದುವೆಂದು ಪ್ರತೀತಿ. ಇದಕ್ಕೆ 'ದ್ವಾತ್ರಿಂಶತ್ಪುತ್ಥಳಿಕಾ' ಅಥವಾ 'ವಿಕ್ರಮಾರ್ಕಚರಿತ' ಎಂಬ ಹೆಸರುಗಳೂ ಉಂಟು. ವಿಕ್ರಮಾದಿತ್ಯನ ವಿಷಯವಾದ 'ವೀರಚರಿತ', ವಿಕ್ರಮೋದಯ, ಶಾಲಿವಾಹನ ಕಥಾ' ಮೊದಲಾದುವು ಈ ಜಾತಿಗೆ ಸೇರಿದುವು. 'ಶುಕಸಪ್ತತಿ' 'ಭೋಜಪ್ರಬಂಧ' 'ಕಥಾರ್ಣವ' 'ಕಥಾಕೌತುಕ'–ಮೊದಲಾದವು ಭಾರತೀಯ ಕಥಾಪ್ರಪಂಚದಲ್ಲಿ ವಿಶೇಷ ಸ್ಥಾನವನ್ನಾಕ್ರಮಿಸಿವೆ. ಅಲ್ಲದೆ ಅನೇಕ ಭಾಷೆಗಳಿಗೆ ಭಾಷಾಂತರವಾಗಿ ಭಾರತದ ಹೊರಗಿನ ದೇಶಗಳಲ್ಲಿಯೂ ವಿಶೇಷ ಪ್ರಚಾರದಲ್ಲಿವೆ.

## ನೈತಿಕ ಕಥೆಗಳು

ಭಾರತೀಯ ಕಥಾಸಾಹಿತ್ಯದಲ್ಲಿ ನೈತಿಕ ಕಥೆಗಳಿಗೆ ಅಗ್ರಸ್ಥಾನ. ಅದರ ಅಸ್ತಿತ್ವವನ್ನು ಕ್ರಿಸ್ತಪೂರ್ವ ಕಾಲದಿಂದಲೂ ಕಾಣಬಹುದು. ಪತಂಜಲಿಯು(ಕ್ರಿ ಪೂ ೧೫೦)'ಕಾಕತಾಳೀಯ, 'ಅಜಾಕೃಪಾಣೀಯ ಎಂಬ ಶಬ್ದಗಳ ರೂಪ ನಿಷ್ಪತ್ತಿಯನ್ನು ಹೇಳುತ್ತಾನೆ. ಇದಕ್ಕೆ ಸಂಬಂಧಪಟ್ಟ ಕೆಲವು ಕಥೆಗಳಿದ್ದಿರಬೇಕು. ಈ ಕಥೆಗಳೆಲ್ಲ ಗದ್ಯರೂಪದಲ್ಲಿಯೇ ರಚಿತವಾಗಿರಬೇಕು. ಉದ್ದಿಷ್ಟವಾದ ನೀತಿಪ್ರತಿಪಾದನೆಗಾಗಿ ಸಹಾಯಕ ಶ್ಲೋಕಗಳು ಪುರಾಣಗಳಿಂದಲೂ ಧರ್ಮಶಾಸ್ತ್ರಗಳಿಂದಲೂ ನೀತಿಶಾಸ್ತ್ರಗಳಿಂದಲೂ ಸಂಗ್ರಹೀತವಾಗಿ ಇವುಗಳ ಮಧ್ಯೆ ಅನುಪದಿತವಾಗಿರುತ್ತವೆ. ಕಥಾಶರೀರದಲ್ಲಿ ಬೇರೆ ಬೇರೆ ಉಪಕಥೆಗಳು ಇಂತಹ ಪದ್ಯಗಳಿಂದ ಸರಪಣಿಯಂತೆ ಜೋಡಿಸಲ್ಪಟ್ಟಿರುತ್ತವೆ. ಕಥೆಯಲ್ಲಿ ಕಥೆಯನ್ನು ಜೋಡಿಸುವ ಪದ್ಧತಿಯು ಬಹುಜನಪ್ರಿಯವಾಗಿ ಪರದೇಶೀಯರೂ ಇದನ್ನು ಅನುಕರಣಮಾಡಿ 'ಅರೇಬಿಯನ್‌ನೈಟ್ಸ್' ಮಾದರಿಯ ಕಥೆಗಳನ್ನು ರಚಿಸಿದ್ದಾರೆ.

ಮಾನವನ ಗುಣಗಳನ್ನು ಮೃಗಪಕ್ಷಿಗಳಿಗೆ ಆರೋಪಿಸಿ ಅವುಗಳ ಮೂಲಕ ಕಥಾನಿರೂಪಣ ಮಾಡುವುದು ಇವುಗಳ ಪ್ರಧಾನಸ್ವರೂಪ. ಆದುದರಿಂದಲೆ ಇವುಗಳಿಗೆ 'ಶ್ವಾಪದಾಖ್ಯಾನ' ಎಂಬ ಹೆಸರು ರೂಢಿಯಲ್ಲಿದೆ. ಇಲ್ಲಿ ಸಾಮಾನ್ಯವಾಗಿ ಜೀವನದ ಸುಗುಣ ದುರ್ಗುಣ ನಿರೂಪಣೆಗೆ ಅವುಗಳ ಜೀವನ ಕೃತ್ಯಗಳನ್ನೇ ಆಧಾರವಾಗಿಟ್ಟುಕೊಂಡಿರುವುದು ಕಂಡುಬರುತ್ತದೆ- ಈ ಅಭ್ಯಾಸವು ಜನ್ಮಾಂತರವಾದದ ಆಧಾರದಮೇಲೆ ಉತ್ಪನ್ನವಾದುದು. ಅನೇಕ ಜೈನಬೌದ್ಧರ ಕಥೆಗಳೂ ಇದೇ ವಾದದ ಆಧಾರದ ಮೇಲೆಯೇ ರಚಿತವಾದುವು.

ಈ ಕಲ್ಪಿತ ಕಥೆಗಳೆಲ್ಲ ಮಾನವನ ರಾಜಕೀಯ ಮತ್ತು ದೈನಂದಿನ ನಿತ್ಯಜೀವನ ಕ್ಷೇತ್ರಕ್ಕೆ ಸಂಬಂಧಪಟ್ಟವು. ಇವುಗಳೆಲ್ಲ ಸಾಮಾನ್ಯವಾಗಿ ರಾಜಕುಮಾರರಿಗಾಗಿಯೇ ರಚಿಸಿರುವಂತಿದೆ. ಜೀವನದ ಅವಗುಣಗಳಾದ ದುರಾಶೆ ಡಂಬಗಾರಿಕೆ, ವಂಚನೆ, ಮೋಸ ಮತ್ತು ಕೃತಘ್ನತೆಗಳು–ಇವುಗಳಲ್ಲಿ ಬಹು ತೀಕ್ಷ್ಣವಾಗಿ ಖಂಡಿಸಲ್ಪಟ್ಟು, ಅದಕ್ಕೆ ನೇರ ಪ್ರತಿದ್ವಂದ್ವಿಗಳಾಗಿರುವ ದಯಾಪರತೆ, ಪೂಜ್ಯತೆ, ಕರ್ತವ್ಯನಿಷ್ಠೆ ರಾಜನಿಷ್ಠೆ, ಪತಿಪತ್ನಿಯರ ದಾಂಪತ್ಯಪ್ರೇಮ, ಅನುರಾಗ–ಮೊದಲಾದುವುಗಳ ವಿಶೇಷವಾಗಿ ಶ್ಲಾಘಿತವಾಗಿವೆ. ಈ ಕಥೆಗಳೆಲ್ಲ ಸರಳವೂ ಹಾಸ್ಯ

ಡಾ॥ ಎನ್. ಅನಂತರಂಗಾಚಾರ್

ಆಗಿ ರಚಿತವಾಗಿವೆ.

## ಪಂಚತಂತ್ರ ಮತ್ತು ಹಿತೋಪದೇಶ

ಈ ಜಾತಿಯ ಕಥೆಗಳ ಪ್ರಧಾನ ಪ್ರತೀಕಗಳು 'ಪಂಚತಂತ್ರ' ಮತ್ತು 'ಹಿತೋಪದೇಶಗಳು' ಇವೆರಡೂ ಏಕಮೂಲದಿಂದ ಉತ್ಪನ್ನವಾಗಿ ಅಲ್ಪ ಸ್ವಲ್ಪ ವ್ಯತ್ಯಾಸದಿಂದ ವಿವಿಧ ಆಕಾರದಲ್ಲಿ ಭರತ ಖಂಡದಲ್ಲಿಯೇ ಅಲ್ಲದೆ ಅಖಂಡ ಪ್ರಪಂಚದಲ್ಲಿ ಬಹಳ ಮಾನ್ಯವೂ ಪ್ರಭಾವಶಾಲಿಯೂ ಆಗಿವೆ. ಈಗ ಉಪಲಬ್ಧವಾಗಿರುವ ಸಂಸ್ಕೃತ 'ಪಂಚತಂತ್ರವು' ಬಹು ಸೊಗಸಾದ ಕಲ್ಪಿತಕಥೆ. ಅರ್ಥಶಾಸ್ತ್ರದ ಐದು ತಂತ್ರಗಳನ್ನೂ ಇದು ಉಪದೇಶಿಸುವುದರಿಂದ ಇದಕ್ಕೆ ಈ ಹೆಸರು ಬಂದಿದೆ. ಇದು ಗದ್ಯದಲ್ಲಿಯೇ ರಚಿತವಾಗಿದ್ದರೂ ಮಧ್ಯೆ ಮಧ್ಯೆ ನೀತಿ ಬೋಧಕವಾದ ಅನೇಕ ಪದ್ಯಗಳನ್ನೊಳಗೊಂಡಿದೆ. ಈ ಶತಮಾನದ ಆದಿಯವರೆಗೆ ಈ ಪಂಚತಂತ್ರವು ಏಕಮುಖವಾದದ್ದೆಂದೂ ಅದರ ಕರ್ತೃ ವಿಷ್ಣುಶರ್ಮನೆಂದೂ ನಂಬಲಾಗಿದ್ದಿತು. ಅಲ್ಲದೆ ವಿಷ್ಣುಶರ್ಮನೆಂಬುವನು ಬ್ರಾಹ್ಮಣನೂ ಶ್ರುತಿ ಸ್ಮೃತಿ ಪುರಾಣೇತಿಹಾಸಗಳಲ್ಲಿಯೂ, ಅರ್ಥದಿಸಿದ್ದವನೂ ಆಗಿದ್ದನು. ಮಹಿಳಾರೋಪ್ಯನಗರದ ರಾಜನಾದ ಅಮರಶಕ್ತಿಯು ಒಂದು ದಿನ ತುಂಬಿದ ಸಭೆಯಲ್ಲಿ ತನ್ನ ಅವಿನೀತರಾದ ಪುತ್ರರಿಗೆ ನೀತಿಶಾಸ್ತ್ರವನ್ನು ಕಲಿಸಬೇಕೆಂದು ವಿಷ್ಣುಶರ್ಮನನ್ನು ಪ್ರಾರ್ಥಿಸಿದಂತೆಯೂ, ಅವನು ಅವರನ್ನು ಆರೇ ತಿಂಗಳಿನಲ್ಲಿ ಸರ್ವಶಾಸ್ತ್ರಪಾರಂಗತರೂ ನೀತಿಶಾಸ್ತ್ರವೇತ್ತರೂ ಆಗುವಂತೆ ಮಾಡಿದಂತೆಯೂ, ಪಂಚತಂತ್ರದ ಕಥಾಮುಖದಿಂದಲೇ ಶ್ರುತಪಡುತ್ತದೆ.

ಆದರೆ ರಾಜನಾದ ಅಮರಶಕ್ತಿಯಾಗಲಿ ಕೃತಿಕಾರನಾದ ವಿಷ್ಣುಶರ್ಮನಾಗಲಿ ಯಾರೆಂದು ಗೊತ್ತಿಲ್ಲ. ಹಾಗೆಯೇ ಪಂಚತಂತ್ರದ ಮೂಲವಾವುದೆಂಬುದೂ ತಿಳಿಯದು. ಆದರ ಮೂಲವು ಬಹುಶಃ ನಷ್ಟವಾಗಿರಬೇಕು. ಅಥವಾ ಕಾಲಾಂತರದಲ್ಲಿ ರೂಪಾಂತರಗೊಂಡಿರಬೇಕು. ಈಗ ಉಪಲಬ್ಧವಾದ ಕೆಲವು ಆಧಾರಗಳ ಮೇಲೆ ಅದರ ಸ್ಥೂಲವಾದ ಚರಿತ್ರೆಯನ್ನು ಊಹಿಸಬಹುದು. ಪಂಚತಂತ್ರವು ಅದು ರಚಿತವಾದಂದಿನಿಂದ ಇಂದಿನವರೆಗೆ ಭಾರತದಲ್ಲಿಯೇ ಅಲ್ಲದೆ ಪ್ರಪಂಚದ ಎಲ್ಲ ಭಾಗಗಳಲ್ಲಿಯೂ ಪರ್ಯಟನಮಾಡಿದೆ. ಈ ದವರು ಜರ್ಮನಿಯ ಇಂಡಾಲಜಿಸ್ಟ್, ಆ
ಯೋಹಾನೆಸ್ ಹೆರ್ಟೆಲ್ Johnnes Herte
ಎಂಬುವರು. ಇವರು ಪಂಚತಂತ್ರದ ಹಲವಾರ
ಸಂಪಾದನೆಗಳನ್ನೂ ವಿಚಾರಮಾಡಿ ಪ್ರಕಟ
ಸಿದ್ದಾರೆ. ಅಲ್ಲದೆ ೧೯೧೪ರಲ್ಲಿ ಪ್ರಕಟಿಸಿದ ಅವ
ಗ್ರಂಥದಲ್ಲಿ ಪಂಚತಂತ್ರವು ಪ್ರಪಂಚದ ಸುಮಾರು
೫೦–೬೦ ಭಾಷಾಂತರಗಳಲ್ಲಿ ಸುಮಾರು ಇನ್ನೂರ
ಕ್ಕಿಂತ ಹೆಚ್ಚು ರೂಪಾಂತರಗಳಲ್ಲಿ ಸಿಕ್ಕುತ್ತವೆ
ಯೆಂದೂ ಅವುಗಳ ಬಹುಭಾಗಗಳಿಗೆ ಪರ
ಭಾಷೀಯ ಪಂಚತಂತ್ರಗಳೇ ಮೂಲವೆಂದೂ ತಿಳಿಸಿದ್ದಾರೆ. ಹೆರ್ಟೆಲ್ ಅವರಿಂದೀಚಿನ ೨೦ ವರ್ಷಗಳಲ್ಲಿ ಈ ಸಂಬಂಧವಾದ ವಿಮರ್ಶೆ ಅತ್ಯದ್ಭುತವಾಗಿ ನಡೆದಿದೆ. ಅಲ್ಲದೆ ಹೆರ್ಟೆಲ್ ಅವರ ಸಂಶೋಧನೆಯು ಸಾಮಾನ್ಯವಾಗಿ ವಿಷ್ಣುಶರ್ಮನ ಸಂಪ್ರದಾಯಕ್ಕೇ ಸೇರಿದುದು. ಅದು ಸಾಮಾನ್ಯವಾಗಿ ಭಾರತದ ಪಶ್ಚಿಮ ಮತ್ತು ವಾಯುವ್ಯ ಭಾಗಗಳ ರೂಪಾಂತರಗಳನ್ನು ಕುರಿತುದು. ಈಚೆಗೆ ವಸುಭಾಗಭಟ್ಟಕೃತ ಪಂಚತಂತ್ರ ಸಂಪ್ರದಾಯವೊಂದು ಗುರುತಿಸಲ್ಪಟ್ಟು, ಅದು ದಕ್ಷಿಣ ಭಾರತದಿಂದ ಭಾರತದ ಪೂರ್ವ ಭಾಗದ ಜಪಾನ್ ಜಾವಾದ್ವೀಪಗಳಿಗೂ ಬರ್ಮ ಮಲಯ ಪ್ರದೇಶಕ್ಕೂ, ಆಫ್ರಿಕಾ ಖಂಡಕ್ಕೂ ಹರಡಿದೆಯೆಂಬುದು ಶ್ರುತವಾಗಿದೆ. ಹೆರ್ಟೆಲ್ ಹಾಗೆಯೇ ಈ ವಿಷಯದಲ್ಲಿ ಈಚೆಗೆ ವಿಶೇಷ ಅಭ್ಯಾಸ ಮಾಡಿದವರು ಫ್ರಾಂಕ್ಲಿನ್ ಎಡ್ಗರ್ಟನ್. ಇವರು ತಮ್ಮ ಸಂಶೋಧನೆಗಳನ್ನು Panchatantra Reconstructed ಎಂಬ ಗ್ರಂಥದಲ್ಲಿ ವಿವರಿಸಿದ್ದಾರೆ. ಈ ಸಂಶೋಧಕರುಗಳ ವಿಚಾರಧಾರೆಯಿಂದ ಪಂಚತಂತ್ರವು ಸಂಪೂರ್ಣವಾಗಿಯೂ ಬಿಡಿಬಿಡಿಯಾಗಿಯೂ ಪ್ರಪಂಚದ ಅನೇಕ ಭಾಷೆಗಳಿಗೆ ಪರಿವರ್ತನವೂ, ರೂಪಾಂತರವೂ ಆಗಿರುವುದಲ್ಲದೆ ಅನೇಕಸಲ ಪುನಃ ಪರಿವರ್ತನವಾಗಿ ಕೊನೆಗೆ ಸ್ವದೇಶಕ್ಕೆ ಹಿಂತಿರುಗಿದ ಸಂಗತಿ ಮನದಟ್ಟಾಗುತ್ತದೆ. ಅಲ್ಲದೆ ಕಾಲದೇಶ ಸನ್ನಿವೇಶಗಳಿಂದ ಅದರ ಬಾಹ್ಯ ಆಕಾರ, ಭಾಷೆ, ಶೈಲಿಗಳು ವ್ಯತ್ಯಾಸವಾಗಿದ್ದರೂ ಅದರ ಮೂಲ ರೂಪವೊಂದೇ ಆಗಿದೆಯೆಂಬುದು ಗಮನೀಯವಾದ ಅಂಶ.

## ಪಂಚತಂತ್ರದ ಪ್ರಪಂಚ ಪರ್ಯಟನ

ಪಂಚತಂತ್ರವು ಮೊದಲು ಪಹಲ್ವಿಯ ಭಾಷಾಂತರ ದಿಂದ ಸುಮಾರು ೧೩ ಶತಮಾನಗಳಲ್ಲಿ ದೇಶ ದೇಶಾಂತರಗಳಲ್ಲೆಲ್ಲ ಭಾಷಾಂತರ ಮರುಭಾಷಾಂತರ, ಪ್ರತಿ ಭಾಷಾಂತರ, ಗದ್ಯದಿಂದ ಪದ್ಯ, ಪದ್ಯದಿಂದ ಗದ್ಯ, ರೂಪಾಂತರವನ್ನು ಹೊಂದಿ ಏಷ್ಯಾ ಮತ್ತು ಯೂರೋಪ್ ಖಂಡದ

ಬಹು ಭಾಗವನ್ನಷ್ಟೇ ಅಲ್ಲದೆ ಆಫ್ರಿಕಾ ಖಂಡದ ಬಹು ಭಾಗಗಳಲ್ಲಿಯೂ ವಿವಿಧ ಹೆಸರುಗಳಿಂದಲೂ ರೂಪಗಳಿಂದಲೂ ಸಂಚಾರ ಮಾಡಿ ಪುನಃ ಭಾರತವನ್ನೇ ಪ್ರವೇಶಿಸಿರುವುದು ಬಹು ಸೋಜಿಗದ ಸಂಗತಿ.

ಇದು ಪಂಚತಂತ್ರದ ಒಂದು ಶಾಖೆಯ ಪರ್ಯಟನ. ವಿಷ್ಣುಶರ್ಮನ ಸಂಪ್ರದಾಯಕ್ಕೆ ಸೇರಿದುದು. ಇದರ ಇನ್ನೊಂದು ಸಂಪ್ರದಾಯ ವಸುಭಾಗಭಟ್ಟನದು. ಇದು ಬಹುಶಃ ವಿಷ್ಣುಶರ್ಮನ ಕಾಲದಿಂದಲೇ ಪ್ರಾರಂಭವಾಗಿರಬೇಕು, ಇದರ ಪರಿಚಯ ಈ ಶತಮಾನದ ಆದಿಯವರೆಗೆ ವಿಶೇಷವಾಗಿರಲಿಲ್ಲ. ಕನ್ನಡದಲ್ಲಿ ದುರ್ಗಸಿಂಹನು ೧೦೩೧ ರಲ್ಲಿ ತನ್ನ ಕರ್ನಾಟಕ ಪಂಚತಂತ್ರವನ್ನು ರಚಿಸಿದ್ದಾನೆ. ಅದರ ಪೀಠಿಕಾ ಪ್ರಕರಣದಲ್ಲಿ ತನ್ನ ಕೃತಿಗೆ ಮೂಲವನ್ನು ಈ ರೀತಿ ತಿಳಿಸಿದ್ದಾನೆ, "ಪುಷ್ಪದಂತನೆಂಬ ಗುಣಪ್ರಧಾನಂ ಮಾನವಲೋಕದೊಳ ಪುಟ್ಟಿ ಗುಣಾಢ್ಯನೆಂಬ ಸತ್ಕವಿಯಾಗಿ ಶಾಲಿವಾಹನನೆಂಬ ಚಕ್ರವರ್ತಿಯ ಕವಿಯಾಗಿದ್ದು ಹರಂ ಗಿರಿಸುತೆಗೆ ಪೇಳ್ದ ಕಥೆಗಳಂ ಪೈಶಾಚಿಕ ಭಾಷೆಯೊಳ್ ಬೃಹತ್ಕಥೆಗಳಂ ಮಾಡಿ ಪೇಳ್ದೊಡೆ, ವಸುಭಾಗಭಟ್ಟಂ ಕೇಳ್ದು ಆ ಕಥಾ ಸಮುದ್ರದೊಳ್ ಪಂಚರತ್ನಮಪ್ಪ ಐದು ಕಥೆಗಳನಾಯ್ದುಕೊಂಡು ಪಂಚತಂತ್ರವೆಂದು ಹೆಸರಿಟ್ಟು ಸಮಸ್ತ ಜಗಜ್ಜೀವನೋಪಕಾರಾರ್ಥಮಾಗಿ ಪೇಳ್ದನದರಿಂ

ವಸುಭಾಗ ಭಟ್ಟ ಕೃತಿಯಂ
ವಸುಧಾಧಿಪಹಿತಮನಖಿಲವಿಪುಲನುತಮಂ
ಪೊಸತಾನಿರೆ ವಿರಚಿಸುವೆಂ
ವಸುಮತಿಯೊಳ್ ಪಂಚತಂತ್ರಮಂ
ಕನ್ನಡದಿಂ

– ಎಂದು ತನ್ನ ಗ್ರಂಥಕ್ಕೆ ವಸುಭಾಗನ ಕೃತಿಯೇ ಆಧಾರವೆಂದು ಸ್ಪಷ್ಟವಾಗಿ ತಿಳಿಸಿದ್ದಾನೆ. ಆದರೆ ಈ ಮೂಲ ಯಾವುದು ಎಂದು ಇತ್ತೀಚಿನವರೆಗೆ ಯಾರಿಗೂ ಗೊತ್ತಿರಲಿಲ್ಲ.

ಆದರೂ ವಸುಭಾಗನ ಹೆಸರನ್ನು ಸೂಚಿಸುವ ಸಂಪ್ರದಾಯ ಗ್ರಂಥಗಳ ಹೆಸರನ್ನು ಅನೇಕ ವಿದ್ವಾಂಸರುಗಳು ಸೂಚಿಸಿದ್ದಾರೆ. ಆ ಗ್ರಂಥಗಳಾವುದರಲ್ಲಿಯೂ ಪಂಚತಂತ್ರವು ವಸುಭಾಗ ಕೃತವೆಂದು ಉಕ್ತವಾಗಿಲ್ಲ. ಆದರೆ ಅವುಗಳು ದಕ್ಷಿಣ ಏಷ್ಯಾದ ಜಪಾನ್, ಚೈನಾ, ಯವದ್ವೀಪ, ಲಾವೋಸ್ ಮೊದಲಾದ ಅನೇಕ ದೇಶಗಳಲ್ಲಿ ಬೇರೆ ಬೇರೆ ಹೆಸರಿನಿಂದ ಪ್ರಸಿದ್ಧವಾಗಿವೆ. ಅಲ್ಲದೆ ಈ ಸಂಪ್ರದಾಯದ ರೂಪಾಂತರಗಳು ಭಾರತೀಯ ಪ್ರಾದೇಶಿಕ ಭಾಷೆಗಳನೇಕವುಗಳಲ್ಲಿ ರಚಿತವಾಗಿವೆ.

ವಿಷ್ಣುಶರ್ಮನ ಪಂಚತಂತ್ರವನ್ನು ಸಂದರ್ಭೋಚಿತವಾಗಿ ಮಾರ್ಪಡಿಸಿ ಪ್ರದರ್ಶನ ಮಾಡುವ ಪ್ರಯತ್ನವೇ ಹಿತೋಪದೇಶ. ಬಂಗಾಳದ ಧವಳಚಂದ್ರನ ಆಶ್ರಿತನಾದ ನಾರಾಯಣನಿಂದ ರಚಿತವಾದುದು. ಈ ಇಬ್ಬರು ವ್ಯಕ್ತಿಗಳು ಯಾರೆಂಬುದು ತಿಳಿಯದು. ಹಿತೋಪದೇಶದಲ್ಲಿ ಬರುವ ಅನೇಕ ಕಥೆಗಳು ಪಂಚತಂತ್ರದಿಂದಲೇ ಆಯ್ದುಕೊಂಡವು. ಅಲ್ಲಿಲ್ಲದ ಅನೇಕ ಕಥೆಗಳು ಇಲ್ಲಿವೆ. ಕಾಮಂದಕನ 'ನೀತಿಸಾರ'ದ ಶ್ಲೋಕಗಳೂ ಇಲ್ಲಿವೆ. ಇದರಲ್ಲಿ ಮಿತ್ರಲಾಭ, ಸುಹೃದ್ಭೇದ, ವಿಗ್ರಹ, ಸಂಧಿ ಎಂಬ ನಾಲ್ಕು ಪ್ರಕರಣಗಳಿವೆ. ಪಂಚತಂತ್ರದ ಒಂದೆರಡನೆಯ ಭಾಗವು ಇಲ್ಲಿ ಹಿಂದು ಮುಂದಾಗಿವೆ. ಮೂರನೆಯ ಭಾಗವು ಎರಡು ವಿಭಾಗವಾಗಿ ಮೂರು ನಾಲ್ಕನೆಯ ಪ್ರಕರಣಗಳಾಗಿವೆ. ಅಲ್ಲಿಯ ನಾಲ್ಕೈದನೆಯ ಭಾಗಗಳು ಇಲ್ಲಿ ಲುಪ್ತವಾಗಿವೆ. ಪಂಚತಂತ್ರದ ಹಾಗೆಯೇ ಇದರ ರಚನೆಗೂ ಕಾರಣರು ರಾಜಪುತ್ರರೇ. ಆದರೆ ಇಲ್ಲಿಯ ದೊರೆ ಪಾಟಲೀಪುತ್ರದ ರಾಜನಾದ ಸುದರ್ಶನ. ಇದರ ಭಾಷೆ ಸುಲಭವಾಗಿಯೂ ಶೈಲಿ ಸರಳವಾಗಿಯೂ ಇವೆ. ಆದರೂ ಪಂಚತಂತ್ರದ ಕಾವ್ಯ ಪ್ರೌಢಿಮೆ ಹಿತೋಪದೇಶದಲ್ಲಿಲ್ಲ. ಇದರ ಪ್ರಾಚೀನ ಕೈಬರಹದ ಪ್ರತಿ ಕ್ರಿ. ಶ. ೧೩೭೩ ಎಂದು ಲಿಖಿತವಾಗಿರುವುದರಿಂದ ಇದರ ರಚನಾಕಾಲ ಇನ್ನೂ ಹಿಂದಿನದಾಗಿರಬೇಕು.

ವಿಷ್ಣುಶರ್ಮನ ಸಂಪ್ರದಾಯದ ಗ್ರಂಥಗಳು ಪಶ್ಚಿಮ ಏಷ್ಯಾ, ಯೂರೋಪ್, ಆಫ್ರಿಕಾ ದೇಶಗಳಲ್ಲಿ ಪರ್ಯಟನ ಮಾಡಿರುವಂತೆ ವಸುಭಾಗ ಸಂಪ್ರದಾಯದ ಗ್ರಂಥಗಳು ದಕ್ಷಿಣ ಏಷ್ಯಾದ ಪ್ರಾಚ್ಯಭಾಗಗಳಾದ ಜಪಾನ್, ಜಾವಾ, ಲಾವೋಸ್ ಮೊದಲಾದ ಭಾಗಗಳಲ್ಲಿಯೂ ಭಾರತೀಯ ದೇಶೀಯ ಭಾಷೆಗಳಲ್ಲಿಯೂ ಹೇರಳವಾಗಿ ಉಪಲಬ್ಧವಾಗಿವೆ. ಇವುಗಳೆಲ್ಲವನ್ನೂ ಬಹು ಶ್ರಮದಿಂದ ಸಂಶೋಧನ ಮಾಡಿ ಡಾ॥ ಎ. ವೆಂಕಟಸುಬ್ಬಯ್ಯನವರು ಕನ್ನಡದ ದುರ್ಗಸಿಂಹನ ಪಂಚತಂತ್ರದ ಆಧಾರದ ಮೇಲೆ ವಸುಭಾಗ ಭಟ್ಟನ ಸಂಪ್ರದಾಯದ ಸ್ವರೂಪವನ್ನು ಸ್ಪಷ್ಟೀಕರಿಸಿದ್ದಾರೆ.

ಈ ಎರಡು ಸಂಪ್ರದಾಯದ ಪಂಚತಂತ್ರಕ್ಕೂ ಧ್ಯೇಯವೊಂದೇ. ನೀತಿ ಪ್ರಚಾರ ಮಾಡುವುದೇ ಅದು. ಇಲ್ಲಿಯ 'ತಂತ್ರ' ಶಬ್ದಕ್ಕೆ ನೀತಿ ಮತ್ತು ನಡತೆಗೆ ಸಂಬಂಧಪಟ್ಟ ಕೃತಿ, ಭಾಗ ಎಂದು ಅರ್ಥ ಮಾಡಬಹುದು. ಈ ಕೃತಿಕಾರರೆಲ್ಲ ತಮ್ಮ ಗ್ರಂಥವನ್ನು ಐದು ಭಾಗ ಮಾಡಿಕೊಂಡು ಅದರಲ್ಲಿ ಮಿತ್ರಭೇದ, ಮಿತ್ರಲಾಭ, ವಿಗ್ರಹ,ಲಬ್ಧಪ್ರಕಾಶ, ಅಪರೀಕ್ಷಿತಕಾರಕ, ಎಂಬ ಐದು ವಿಷಯಗಳ ಸಂಬಂಧವಾದ ನೀತಿಗಳನ್ನು ತಿಳಿಸಿರುವುದರಿಂದ ಇದಕ್ಕೆ ಪಂಚತಂತ್ರವೆಂಬ ಹೆಸರು ಬಂದಿದೆ. ಈ ವಿಭಾಗಕ್ರಮ ವಿಷ್ಣುಶರ್ಮನ ಸಂಪ್ರದಾಯದ ಗ್ರಂಥಗಳ ವಿಭಾಗ ಕ್ರಮ. ಒಟ್ಟು ಪಂಚತಂತ್ರ ಸಾಹಿತ್ಯವನ್ನು ತುಲನಾತ್ಮಕ ದೃಷ್ಟಿಯಿಂದ ನೋಡಿದರೆ ಈ ವಿಭಾಗ ಕ್ರಮ ಅವುಗಳ ಹೆಸರು, ಆಕಾರ, ಅದರಲ್ಲಿ ಉಕ್ತವಾಗಿರುವ ಕಥೆಗಳ ಸ್ವರೂಪ ಸಂಖ್ಯೆ ಅನುವಾದಿತವಾಗಿರುವ ಶ್ಲೋಕಗಳು ಎಲ್ಲವೂ ಭಿನ್ನ ಭಿನ್ನವಾಗಿರುತ್ತವೆ.

ವಿಷ್ಣುಶರ್ಮನ ಪಂಚತಂತ್ರದ ವಿಭಾಗವನ್ನು ಅದರ ಪ್ರಾರಂಭದಲ್ಲಿಯೇ ಬರುವ

ಮಿತ್ರಭೇದಃ ಸುಹೃಲ್ಲಾಭಃ
ಸಂಧಿವಿಗ್ರಹ ಏವ ಚ
ಲಬ್ಧನಾಶಮಸಂಪ್ರೇಕ್ಷ್ಯ
ಕಾರಿತ್ವಂ ಪಂಚತಂತ್ರಿಕೇ

ಎಂಬ ಶ್ಲೋಕದಲ್ಲಿ ಉಕ್ತವಾಗಿದ್ದರೆ ವಸುಭಾಗನ ವಿಭಾಗ ಕ್ರಮವು ದುರ್ಗಸಿಂಹನ ಗ್ರಂಥದ ಪೀಠಿಕಾ ಪ್ರಕರಣದಲ್ಲಿ ಬರುವ

ಭೇದಃ ಪರೀಕ್ಷಾವಿಶ್ವಾಸಃ
ಚತುರ್ಥಂ ವಚನಂ ತಥಾ
ಮಿತ್ರ ಕಾರ್ಯಂ ಚ ಪಂಚೈತೇ
ತಥಾ ತಂತ್ರಾರ್ಥ ಸಂಜ್ಞಕಾಃ

ಎಂಬ ಶ್ಲೋಕದಲ್ಲಿ ನಿರೂಪಿತವಾಗಿದೆ. ಅಂದರೆ ವಿಷ್ಣುಶರ್ಮನ ಸಂಪ್ರದಾಯದ ಪ್ರಕಾರ ಮಿತ್ರಭೇದ, ಮಿತ್ರ ಸಂಪ್ರಾಪ್ತಿ, ಕಾಕೋಲೂಕೀಯಂ, ಲಬ್ಧ ಪ್ರಣಾಶಂ, ಅಪರೀಕ್ಷಿತಕಾರಕಂ ಎಂಬ ಐದು ತಂತ್ರಗಳಿದ್ದರೆ ವಸುಭಾಗರೀತ್ಯಾ ಭೇದ, ಪರೀಕ್ಷಾ, ವಿಶ್ವಾಸ, ವಂಚನ, ಮತ್ತು ಮಿತ್ರ ಕಾರ್ಯವೆಂಬ ಐದು ಪ್ರಕರಣಗಳಿರುತ್ತವೆ. ಇದನ್ನನುಸರಿಸಿದ ಉಳಿದ ಗ್ರಂಥರಳಲ್ಲಿಯೂ ಇವೇ ವಿವಿಧ ರೀತಿಯಲ್ಲಿರುತ್ತವೆ.

ದುರ್ಗಸಿಂಹನ ಪಂಚತಂತ್ರವು ವಸುಭಾಗನ ಕೃತಿಯ ನೇರಭಾಷಾಂತರವಲ್ಲ. ಅದನ್ನೇ ಪ್ರಧಾನವಾಗಿಟ್ಟುಕೊಂಡು ಬೇರೆ ಕಡೆಯಿಂದ ಸಂಗ್ರಹಿಸಿದ ಅಥವಾ ಸ್ವಂತ ಕೃತಿಗಳ ಜೋಡಣೆಯಿಂದ ಪುಷ್ಟೀಕರಿಸಿದ ಗ್ರಂಥವೆಂದು ಹೇಳಬೇಕಾಗುತ್ತದೆ. ಈ ದೃಷ್ಟಿಯಿಂದ ವಸುಭಾಗ ಸಂಪ್ರದಾಯದ ಸ್ಪಷ್ಟೀಕರಣಕ್ಕೆ ಇದು ಮೂಲ ಸ್ತಂಭದೋಪಾದಿಯಲ್ಲಿರುವುದರಿಂದ ಈ ಗ್ರಂಥಕ್ಕೆ ಪಂಚತಂತ್ರ ಸಾಹಿತ್ಯರಾಶಿಯಲ್ಲಿ ಪ್ರಧಾನಸ್ಥಾನವಿದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ದುರ್ಗಸಿಂಹನ ಗ್ರಂಥವು 'ಛಂದೋಂಬುಧಿ' ಮತ್ತು 'ಲೋಕೋಪಕಾರ'ಗಳನ್ನು ಬಿಟ್ಟರೆ ಆದಿಕಾಲದ ಪ್ರಧಾನಶಾಸ್ತ್ರಗ್ರಂಥವಾಗಿರುವುದರಿಂದಲೂ

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಉತ್ತಮ ಜೈನೇತರ ಚಂಪೂ ಗ್ರಂಥವಾಗಿರುವುದರಿಂದಲೂ ಇದಕ್ಕೆ ವಿಶೇಷ ಸ್ಥಾನವಿದ್ದೇ ಇದೆ.

## ದುರ್ಗಸಿಂಹನ ಜೀವನ ದೇಶ, ಕಾಲ ಮತ್ತು ವಿಚಾರ

ಅನೇಕ ಭಾರತೀಯ ಕವಿಗಳಂತಲ್ಲದೆ ದುರ್ಗಸಿಂಹನು ತನ್ನ ಗ್ರಂಥದಲ್ಲಿ ಸ್ವವಿಷಯವನ್ನು ಬಹು ದೀರ್ಘವಾಗಿಯೇ ವಿವರಿಸಿದ್ದಾನೆ. ಅದರ ವಿವರ ಹೀಗಿದೆ– "ಕರ್ಣಾಟಕ ಧಾತ್ರೀತಿಲಕವೂ ಅಖಿಲ ಜಗತೀಖ್ಯಾತವೂ ಆದ ಕಿಸುಗಾಡನಾಡು ಸುಪ್ರಸಿದ್ಧವಾಗಿದೆ. ಅದರಲ್ಲಿ ವಿಪುಲ ಶ್ರೀನಿಲಯವೆನಿಸಿ ಸೈಯಡಿ ಎಂಬ ಅಗ್ರಹಾರ ನಾನಾ ವಸ್ತು ತ್ಯರಾಕಾರವಾಗಿ ಮೆರೆಯುತ್ತಿದೆ. ಪರಮಾನಂದವನ್ನು ಕೊಡುವ ದೇವಭವನ ಶ್ರೀಲೀಲೆಯಿಂದಲೂ ಧರಾಮರರು ಉತ್ಸಾಹದಿಂದ ಮಾಡುವ ಮಖಸಂದೋಹಗಳಿಂದಲೂ ಮುನೀಶ್ವರರ ಸದ್ಬ್ರಾಹ್ಮಣಕವಿವೃಂದದವರ ಸ್ತುತಿಯಿಂದಲೂ ಕೂಡಿ ವಿಶೇಷ ರಮ್ಯವಾಗಿದೆ. ಆ ಸೊಗಯಿಸುವ ಅಗ್ರಹಾರದಲ್ಲಿ ತರ್ಕವ್ಯಾಕರಣ ವಾತ್ಸ್ಯಾಯನಾದ್ಯಶೇಷವಿದ್ಯಾಪ್ರಕರಣನೂ ಸಕಲಧರ್ಮಕ್ಕೊಕ್ಕೈಕಾಲು ಮೂಡಿದಂತಿರುವ ದುರ್ಗಸಿಂಹನೆಂಬ ಬ್ರಾಹ್ಮಣನುಂಟು. ಆತನ ಪತ್ನಿ ರೇವಕಬ್ಬೆ. ಗೌರಿಯೋಪಾದಿಯಲ್ಲಿ ಪತಿಭಕ್ತಿಯಿಂದಿರಲಾಗಿ ಆ ದಂಪತಿಗಳಿಗೆ ತಮ್ಮ ಕುಲಕ್ಕೆ ಪ್ರದೀಪನಾಗಿ ಗೌತಮಕುಲದಲ್ಲಿ ಸಮುದ್ರದಲ್ಲಿ ಚಂದ್ರನು ಹುಟ್ಟುವಹಾಗೆ ಹುಟ್ಟಿ, ಮನ್ವಾದಿ ಪುರಾಣ ಮುನಿಗಣ ಪ್ರಣೀತವಾದ ಶ್ರುತಿವಿಹಿತವಿಶುದ್ಧಮಾರ್ಗನೂ, ಆತ್ಮೀಯ ಬಂಧುವರ್ಗನೂ, ನಿತ್ಯ ಹೋಮಾಧ್ಯಯನಾನೇಕಯಾಗಾವಭೃಥಸ್ನಾನಪವಿತ್ರಗಾತ್ರನೂ, ಸುಜನೈಕಮಿತ್ರನೂ ಸಕಲ ವೇದಾಧ್ಯಯನ ಮುಖರ ಪವಿತ್ರಾನನನೂ ಸಂತರ್ಪಿತ ಅತಿಥಿಪಿತೃದೇವತಾದ್ವಿಜನ್ಮಾನನೂ ಭಗವನ್ನಾರಾಯಣಚರಣಾಂಬುಜಸ್ಮರಣಪರಿಣತಾಂತಃಕರಣನೂ ತರ್ಕ ವ್ಯಾಕರಣಕಾವ್ಯನಾಟಕಭರತವಾತ್ಸ್ಯಾಯನಾದ್ಯಶೇಷ ವಿದ್ಯಾಸಮುದ್ರತರಣಗುಣೈಕಪುಣ್ಯನೂ, ಧರಾಮರಾಗ್ರಗಣ್ಯನೂ ಆಗಿ ಜಗಜ್ಜನಜಾಲದಿಂದ ವಿನಯೈಕಜನ್ಮಗ್ರಹನ್ ಇತ್ಯಾದಿ ಅನೇಕ ಗುಣಗಳಿಂ ಪೊಗಳಿಸಿಕೊಂಡು ದುರ್ಗಮಯ್ಯನೆಂಬುವನು ಪ್ರಸಿದ್ಧನಾದನು. ಆ ವಿಪ್ರೋತ್ತಮನಿಗೆ ಈಶ್ವರಾರ್ಯನೆಂಬುವನು ಮಗನಾದನು. ಆತನ ಸತಿ ರೇವಕಬ್ಬೆ ಎಂಬವಳು. ಆವರೀರ್ವರಿಗೂ ದುರ್ಗನು ಮಗನಾಗಿ ಹುಟ್ಟಿದನು. ಈತನು ತನ್ನ ಆಶ್ರಯದಾತನಾದ ಸಕಲ ಚಕ್ರವರ್ತಿಯ ಆಜ್ಞೆಯ ಪ್ರಕಾರ ಸೈಯಡಿಯಲ್ಲಿ ಹರಿಹರ ಭವನಗಳನ್ನು ಮಾಡಿಸಿ ಕೃತಾರ್ಥನಾದನು. ಈತನು ವಿಶೇಷ ಗುಣಗಳಿಂದ ಕೂಡಿ ಪ್ರಸಿದ್ಧನಾದನು. ಈತನಿಗೆ ಪರಮಾತ್ಮನೂ ಪರಮೇಶ್ವರನೂ ಆದ ಮುರಹರನೇ ದೈವ. ಮಹಾಯೋಗಿಗಳಾದ ಶಂಕರಭಟ್ಟರೇ ಗುರುಗಳು. ಚೋಳಕಾಲಾನಲನೂ ಧರಣೀಶಾಗ್ರಣಿಯೂ ಚಕ್ರವರ್ತಿತಿಲಕನೂ ಆದ ಜಯಸಿಂಹನೇ ಪೊರೆದವನು. ಆತನ ದಂಡನಾಯಕ ಕೋದಂಡ ರಾಮಾಧಿಪನು. ಅವನು ಪ್ರೀತಿಯಿಂದ ಕೊಡಿಸಲಾಗಿ ದುರ್ಗನು ಚಾಲುಕ್ಯ ಚಕ್ರವರ್ತಿ ಜಯಸಿಂಹನಲ್ಲಿ ಸಂಧಿವಿಗ್ರಹ ಪದವಿಯನ್ನು ಪಡೆದನು." ಈ ದುರ್ಗಸಿಂಹನು ಒಂದನೆಯ ಜಗದೇಕಮಲ್ಲ ಜಯಸಿಂಹನ ಆಳ್ವಿಕೆಯಲ್ಲಿ ಪ್ರಜಾಪತಿ ಸಂವತ್ಸರ ಚೈತ್ರಮಾಸ ಸಿತಪಕ್ಷ ದ್ವಾದಶೀ ತಾರಕಾಪತಿವಾರದಂದು ಪಂಚತಂತ್ರವನ್ನು ಬರೆದು ಮುಗಿಸಿದನು, ಅಂದರೆ ಇವನ ಗ್ರಂಥವು ಕ್ರಿ. ಶ. ೧೦೩೧ ರಲ್ಲಿ ಪೂರ್ಣಗೊಂಡಿತು.

ಇವನ ಊರಾದ ಸೈಯ್ಯಡಿಯು ಈಗ ಧಾರವಾಡ ಜಿಲ್ಲೆಗೆ ಸೇರಿದ ರೋಣ ತಾಲೋಕಿನಲ್ಲಿದೆ. ಈ ಅಗ್ರಹಾರದಲ್ಲಿಯೇ ಅವನ ಹಿರಿಯರೆಲ್ಲರೂ ಇದ್ದುದು. ಈ ಸೈಯ್ಯಡಿಯಲ್ಲಿಯೇ ಚಕ್ರವರ್ತಿಯ ಆಜ್ಞೆಯ ಪ್ರಕಾರ ದುರ್ಗಸಿಂಹನು ಹರಿಹರಭವನಗಳನ್ನು ಕಟ್ಟಿಸಿದುದು. ಅದರ ಭಾಗಗಳು ಈಗಲೂ ಇವೆ. ಈ ದೇವಾಲಯಗಳಲ್ಲಿ ನಾರಾಯಣ, ಶಿವಲಿಂಗನ ಮತ್ತು ತ್ರಿಮೂರ್ತಿಗಳ ವಿಗ್ರಹಗಳಿವೆ.

ದುರ್ಗಸಿಂಹನು ಸ್ಮಾರ್ತ ಬ್ರಾಹ್ಮನಿರಬೇಕು. ಇವನ ಹಿರಿಯರು ಯಜ್ಞಯಾಗಾದಿಗಳಿಂದ ಪವಿತ್ರೀಕೃತರಾದವರು. ಭಗವನ್ನಾರಾಯಣ ಚರಣಾಂಬುಜಸ್ಮರಣಪರಿಣತಾಂತಃಕರಣರೂ ಆಗಿದ್ದವರು. ಇವನು ಹರಿಹರರಲ್ಲಿ ಅಭೇದವನ್ನುಂಟು ಮಾಡಿರುವುದರಿಂದ ಭಾಗವತ ಸಂಪ್ರದಾಯಕ್ಕೆ ಸೇರಿದವನಾಗಿರಬೇಕು. ಇವನ ಗ್ರಂಥವಾದ ಪಂಚತಂತ್ರದಲ್ಲಿ ಕೆಲವು ಜೈನ ಸಂಪ್ರದಾಯಗಳಿಗೆ ಸೂಚನೆಯಿರುವುದು, ಅವನ ಕಾಲದ ಮತ್ತು ಅವನ ಮೂಲ ಗ್ರಂಥಗಳ ಪ್ರಭಾವವಿದ್ದಿರಬೇಕು. ಪಂಚತಂತ್ರದ ಮೇಲೆ ಬೌದ್ಧ ಪ್ರಭಾವವಿದ್ದಿರಬೇಕೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಇದನ್ನು ಸ್ಪಷ್ಟವಾಗಿ ಹೀಗೆಯೇ ಎಂದು ಹೇಳಲಾಗುವುದಿಲ್ಲ. ಅದರೂ ದುರ್ಗಸಿಂಹನ ಕಾಲದಲ್ಲಿ ಕರ್ಣಾಟಕದಲ್ಲಿ ಜೈನಮತವು ಪ್ರಬಲವಾಗಿತ್ತೆಂದು ಹೇಳುವುದರಲ್ಲಿ ಸಂದೇಹವಿಲ್ಲ.

## ದುರ್ಗಸಿಂಹನ ಪಂಚತಂತ್ರ

ಇದು ವಿಷ್ಣುಶರ್ಮನ ಪಂಚತಂತ್ರದಂತೆಯೇ ಪ್ರಧಾನವಾಗಿ ರಾಜನೀತಿಪ್ರತಿಪಾದಕ ಗ್ರಂಥ.

(31ನೇ ಪುಟ ನೋಡಿ)

# ಶ್ರೇಷ್ಠಾವತಾರಗಳು

ಅವತಾರ ಎಂದರೆ, ಇಳಿದು ಬರುವುದು ಎಂದರ್ಥ. ಭಗವಂತ ಮತ್ತು ಅವತಾರ –ಇವೆರಡು ಒಂದೇ ನಾಣ್ಯದ ಎರಡು ಮುಖಗಳು. ಭಗವದವತಾರ ಎಂದರೆ ಭಗವಂತನು ತನ್ನ ನೆಲೆಯಾದ ವೈಕುಂಠ ದಿಂದ ಒಂದು ದಿವ್ಯವಾದ, ಸುಂದರವಾದ ಮೂರ್ತಿಯಿಂದ ಕೂಡಿದವನಾಗಿ ಧರೆಗೆ ಇಳಿದುಬಂದು ಅನುಗ್ರಹಿಸುವುದು ಎಂದರ್ಥ.

ಏಷ ನಾರಾಯಣ ಶ್ರೀಮಾನ್
ಕ್ಷೀರಾರ್ಣವನಿಕೇತನಃ
ನಾಗಪರ್ಯಂಕಂ ಉತ್ಸೃಜ್ಯ
ಹ್ಯಾಗತೋ ಮಧುರಾಂ ಪುರೀಂ
–ವಿಷ್ಣು ಪುರಾಣ.

ಪುರುಷೋತ್ತಮನಾದ ಮಹಾವಿಷ್ಣುವು ಪ್ರತಿ ಯುಗದಲ್ಲಿ ದೇವ, ತಿರ್ಯಕ್ ಮತ್ತು ಮನುಷ್ಯಾದಿ ರೂಪಗಳಲ್ಲಿ ಅವತರಿಸಿ ಧರ್ಮ ಸ್ಥಾಪನೆ ಮತ್ತು ರಕ್ಷಣೆ ಮಾಡುವನು.

ತಿರ್ಯಕ್ ಮನುಷ್ಯ ವಿಬುಧಾದಿಷು
ಜೀವಯೋನಿ........ಪುರುಷೋತ್ತಮಾಯಾ
ಭಾಗವತ 3–9–19

ಆಶ್ರಿತ ವಿರೋಧಿಗಳ ಹಾಗೂ ದುಷ್ಟರ ಸಂಹಾರ, ಶಿಷ್ಟಪರಿಪಾಲನೆ, ಧರ್ಮ ಹಾಗೂ ಸಾಧುಗಳ ರಕ್ಷಣೆ ಮತ್ತು ಲೋಕ ಕಲ್ಯಾಣಕ್ಕಾಗಿ ಭಗವದವತಾರವಾಗುವುದು. ಧರ್ಮ ಸಂಸ್ಥಾಪನೆ ಗಾಗಿಯೇ ಅವತಾರವಾಗುವುದು ಎಂದು ವೇದ ತಿಳಿಸುವುದು.

ಯದಾ ಯದಾ ಹಿ ಧರ್ಮಸ್ಯ
ಗ್ಲಾನಿರ್ಭವತಿ ಭಾರತ।............

ದಶಾವತಾರಗಳೂ ಸೇರಿ ವಿಷ್ಣುವಿನ ಅವತಾ ರಗಳು ಇಪ್ಪ. ಆಯಾ ಮನ್ವಂತರಗಳಲ್ಲಿ ಇನ್ನೂ ಅನೇಕ ಅವತಾರಗಳನ್ನು ಮಾಡಿರುವನು. "ಅಜಾ ಯಮಾನೋ ಬಹುಧಾ ವಿಜಾಯತೆ". ಪರಮ ಪುರುಷನ ಅವತಾರವು ಅಪ್ರಾಕೃತವಾದುದು, ಕರ್ಮಪರವಶವಾದುದಲ್ಲ. ಈ ಅವತಾರಗಳೆಲ್ಲವೂ ಸತ್ಯವಾದುವು. ಈ ಅವತಾರಗಳನ್ನು ಅಂಶಾವ ತಾರ, ಆವೇಶಾವತಾರ ಮತ್ತು ಉಪದೇಶಾವ ತಾರಗಳಾಗಿ ವಿಂಗಡಿಸಬಹುದು. ಮನು, ಮನು ಪುತ್ರರು, ಇಂದ್ರಾದಿ ದೇವತೆಗಳು ಮತ್ತು ಋಷಿ ಗಳು ಅಂಶಾವತಾರಗಳು. ಪರಶುರಾಮ ಆವೇ ಶಾವತಾರ.

ಮತ್ಸ್ಯ, ವರಾಹ, ಹಯಗ್ರೀವ, ರಾಮ ಮತ್ತು ಕೃಷ್ಣಾವತಾರಗಳು ಉಪದೇಶಾವತಾರ ಗಳು. ಯಾವ ಅವತಾರದಲ್ಲಿ ಭಗವಂತನ ಸರ್ವ ಶಕ್ತಿ ಸಾಮರ್ಥ್ಯ ಮತ್ತು ಕಲ್ಯಾಣಗುಣಗಳು ಲೋಕಕ್ಕೆ ತಿಳಿದು ಕಲ್ಯಾಣವಾಗುವುದೋ ಅದೇ "ಪೂರ್ಣ" ಅಥವ "ಶ್ರೇಷ್ಠಾವತಾರ". ನೃಸಿಂಹ, ರಾಮ ಮತ್ತು ಕೃಷ್ಣಾವತಾರಗಳೇ ಬಹು ಜನ ಪ್ರಿಯ, ಆಕರ್ಷಕ ಮತ್ತು ಮಹಾಶ್ರೇಷ್ಠಾವತಾರ ಗಳು.

'ಹರೇ ರಾಮಕೃಷ್ಣ'

ಹರೇ ಎಂದರೆ ನೃಸಿಂಹ ಅಥವ ನೃಹರೇ ಎಂದು. ನರಸಿಂಹ ಎಂದರೆ ನರಶ್ರೇಷ್ಠ ಎಂದು ಅರ್ಥವಾಗುವುದು. ಈ ಅವತಾರತ್ರಯದಿಂದಲ್ಲವೇ ಜಯ–ವಿಜಯರ ಶಾಪವಿಮೋಚನೆಯಾಗು ವುದು?

ಸಂತಶ್ರೇಷ್ಠರುಗಳಾದ ಆಳ್ವಾರುಗಳು, ಪುರಂದರ ದಾಸರು, ತ್ಯಾಗರಾಜರು ಈ ಮೂರು ದೇವರುಗಳ ಮೇಲೆ ಸಹಸ್ರಾರು ಕೀರ್ತನೆ, ಗೀತೆ ಶ್ಲೋಕ ಮತ್ತು ದೇವರ ನಾಮಗಳನ್ನು ರಚಿಸಿ, ಹಾಡಿ ಕೊಂಡಾಡಿ ಭಗವದ್ಭಕ್ತಿ ಮತ್ತು ಆನಂದ ವನ್ನು ಅನುಭವಿಸಿದ್ದಾರೆ. ಕೋಟ್ಯಾಂತರ ಹಿಂದೂ ಗಳ ನಾಮಧೇಯಗಳು ಮತ್ತು ಭಾರತದಲ್ಲಿನ ಅಸಂಖ್ಯಾತ ಹಳ್ಳಿಗಳು, ಊರು, ಪಟ್ಟಣಗಳು ಭಗವಂತನ ಈ ಮೂರು ದಿವ್ಯನಾಮಗಳುಳ್ಳದ್ದಾ ಗಿವೆ. ಹಿಂದೂಗಳು ನೃಸಿಂಹ ಜಯಂತಿ, ರಾಮ ನವಮಿ ಮತ್ತು ಕೃಷ್ಣಜಯಂತಿ ಎಂದು ಹಬ್ಬಗ ಳಾಗಿ, ದೇವಾಲಯಗಳಲ್ಲಿ ವಿಶೇಷ ಪೂಜೆ ಉತ್ಸ ವಗಳಾಗಿ ಆಚರಿಸುವರು. ವಿಷ್ಣುದೇವಾಲಯಗ ಳಲ್ಲಿ ಪ್ರತ್ಯೇಕ ಸನ್ನಿಧಿ ಇದ್ದು ರಾಜಗೋಪು ರಗಳಲ್ಲಿ ರಾಮಕೃಷ್ಣಾದಿಗಳ ಸುಂದರ ಸುಧಾ ಮೂರ್ತಿಗಳು ಗೋಚರಿಸುವುವು.

## ನೃಸಿಂಹಾವತಾರ

ಈ ಅವತಾರದ ವೈಶಿಷ್ಟ್ಯವನ್ನು ಈ ಕೆಳಕಂಡ ವಿಶೇಷಾಂಶಗಳಿಂದ ನೋಡಬಹುದು.

"ಪ್ರಹ್ಲಾದಾರ್ಥೇ ನೃಸಿಂಹ"–ಕೇವಲ ಒಂದು ಶಿಶುವಿಗಾಗಿ ಈ ಅವತಾರವಾಯಿತು. ಇದನ್ನು ಮೂರು ವಿಶೇಷ ಸಂದರ್ಭಗಳಿಂದ ಸಮರ್ಥಿಸ ಬಹುದು.

ಶ್ರೀ ಸಿ. ಗೋವಿಂದಾಚಾರ್

ಮಹಾ ಅಸುರನಾದ ಹಿರಣ್ಯನು ಪ್ರಹ್ಲಾದನ ಮರಣವನ್ನು ಲೆಕ್ಕಿಸದೆ, ಘೋರ ಶಿಕ್ಷೆಗಳನ್ನು ಕೊಟ್ಟರೂ, ಭಗವತ್ಕಟಾಕ್ಷದಿಂದ ಅವೆಲ್ಲವೂ ವಿಫ ಲವಾಗಿ ಶಿಶುವಿಗೆ ಯಾವುದೇ ಆಘಾತವಾಗುವು ದಿಲ್ಲ. ನರಸಿಂಹನ ಭೀಕರ ಕೋಪವನ್ನು ಶಮನ ಮಾಡಲು ಬ್ರಹ್ಮಾದಿಗಳೆಲ್ಲರೂ ವಿಫಲರಾಗುವರು. ದಿವ್ಯಮಹಿಷಿಯಾದ ಮಹಾಲಕ್ಷ್ಮಿಯೂ ಸಹ ಹಿಂಜರಿಯುವಳು. ಪ್ರಹ್ಲಾದನನ್ನು ಮುಂದೆ ಬಿಟ್ಟು, ಬ್ರಹ್ಮಾದಿಗಳೇ 'ದೇವ ಶಾಂತನಾಗು' ಎಂದು ಮೊರೆ ಇಡುವರು. ಇಂತಹ ಉಗ್ರರೂಪಿ ಯಾದ ಭಗವಂತನು ಭಕ್ತನನ್ನು ಕಂಡ ಕೂಡಲೇ ಕೋಪವೆಲ್ಲಾ ಶಮನವಾಗಿ ಶಾಂತಮೂರ್ತಿಯಾ ಗುವನು. ಎಲ್ಲಾ ಅವತಾರಗಳಿಗಿಂತ ಇದು ಬಹಳ ಕಠಿಣವಾದುದು. ಏಕೆಂದರೆ, ಹಿರಣ್ಯನ ವರಪ್ರ ಸಾದಗಳು ಅಷ್ಟು ಪ್ರಬಲವಾದವು. ಈ ಅತ್ಯ ದ್ಭುತ ಅವತಾರದ ಅವಧಿ ಕೆಲವೇ ಘಳಿಗೆಗಳು ಮಾತ್ರ. ಪ್ರಹ್ಲಾದನಿಗೋಸ್ಕರ ಭಗವಂತನು, ಅಂತರ್ಯಾಮಿಯಾಗಿ ಅಣುರೇಣು ತೃಣಕಾಷ್ಠಗ ಳಲ್ಲಿಯೂ ಇರುವುದನ್ನು ಕಾಣಬಹುದು. ಬೇರಾವ ಅವತಾರದಲ್ಲಿಯೂ ಇದು ಕಂಡು ಬರುವುದಿಲ್ಲ. ಇಲ್ಲಿ ಭಗವತ್ಸಂಕಲ್ಪವೆಂದರೆ; ತನ್ನ ಭಕ್ತನಾದ ಪ್ರಹ್ಲಾದನ ವಾಕ್ಯವನ್ನು ಸತ್ಯವಾಗಿಸುವುದು. ಅದಷ್ಟು ಬೇಗ ಹಿರಣ್ಯನ ಸಂಹಾರವಾಗಿ, ಅವ ನನ್ನು ಮುಕ್ತಗೊಳಿಸಿ ಮರಳಿ ವೈಕುಂಠದಲ್ಲಿ ದ್ವಾರ ಪಾಲಕನಾಗಿ ನೋಡುವುದು. ಭೂಲೋಕದಲ್ಲಿ 'ಅರ್ಚಾಮೂರ್ತಿಯಾಗಿ' ನೆಲೆಸುವುದು–ಇವೇ ಅವನ ಮಹಾಸಂಕಲ್ಪಗಳಾಗಿವೆ. ಇವುಗಳ ಸಲು ವಾಗಿಯೇ ಅಲ್ಲವೆ ಗರುಡಾಚಲವಾದ ಅಹೋಬಿಲ ದಲ್ಲಿ (ದೊಡ್ಡ ಬಿಲ ಅಥವ ಗುಹೆ) ನವನಾರಸಿಂಹ ಮೂರ್ತಿಯಾಗಿ ನೆಲೆಸಿರುವುದು.

ಕಂಬ ಸೀಳಿ ಹೊರಬಂದು ಯುದ್ಧಕ್ಕೆ ಸಿದ್ಧವಾದ ರೂಪಕ್ಕೆ "ಜ್ವಾಲಾ ನೃಸಿಂಹ" ಎಂದು ಹೆಸರು. ಈ ಸನ್ನಿವೇಶವನ್ನು ದೇಶಿಕರು 'ಕಾಮಾಸಿ ಕಾಷ್ಟಕಂ' ನಲ್ಲಿ ಚೆನ್ನಾಗಿ ವರ್ಣಿಸಿದ್ದಾರೆ.

ಸಟಾಪಟಲ ಭೀಷಣೇ
ಸರಭಸಾಟ್ಟಹಾಸೋದ್ಭಟೇ.........

ಊಹೆಗೆ ಮೀರಿದ ಈ ರೂಪ 14 ಲೋಕ ಗಳನ್ನು ದಹಿಸತೊಡಗಿತು. ಬ್ರಹ್ಮರುದ್ರಾದಿಗಳು, ತಲ್ಲಣಿಸಿದರು. ಚರಾಚರಾತ್ಮಕವಾದ ಸಮಸ್ತ

ಭೂತಗಳಲ್ಲಿ ತಾನು ಅಂತರ್ಯಾಮಿಯಾಗಿರುವು ದನ್ನು ಮತ್ತು ಪರತತ್ತ್ವವಾಗಿರುವುದನ್ನು ಇದು ಸೂಚಿಸುತ್ತದೆ.

ಆ ರಾಜಸಭೆಯಲ್ಲಿದ್ದವರೆಲ್ಲರೂ ಈ ರೂಪವನ್ನು ನೋಡಿ "ಇದೇನು ಪ್ರಳಯ ಬಂತೇ" ಎಂಬ ಭೀತಿಯಿಂದ ನಡುಗಿದರು. ಈ ರೂಪವು ಹಠಾತ್ತಾಗಿ ಬಂದದ್ದು, ಯಾರು ಭಾವಿಸಿರಲಿಲ್ಲ. ಹಿರಣ್ಯನು ಕೂಡ ಬೆಚ್ಚಿಬಿಟ್ಟನು. ಇವನ ಕಣ್ಣಿಗೆ ಆ ರೂಪ ಭೀಕರ ನೃಸಿಂಹನಾಗಿ ಕಾಣುವುದು. ಈ ರೀತಿ ಯಲ್ಲಿ ನರ-ಸಿಂಹ ರೂಪವು ಅಸಂಭವ ಮತ್ತು ಅಘಟನೀಯವೆಂದು ನಿಶ್ಚಯಿಸಿ, ಮೋಸ ಹೋದೆ ನಲ್ಲಾ ಎಂದು ಪಶ್ಚಾತ್ತಾಪ ಪಡುವನು. ಆದರೆ ಪ್ರಹ್ಲಾದನ ಕಣ್ಣಿಗೆ ನೃಸಿಂಹನು ಶಾಂತಮೂರ್ತಿ ನಾರಾಯಣನ ಹಾಗೆ ಗೋಚರಿಸುವನು. ಭಗ ವಂತನ ಮಡಿಲಲ್ಲೇ ಹಿರಣ್ಯನ ಸಾವು, ಸ್ವಲ್ಪವೂ ನೋವಾಗದಂತೆ ಸಂಹಾರ ಮಾಡಿ ಕರುಳನ್ನು ಮಾಲೆಯಾಗಿ ಧರಿಸುವುದು, ಅವನ ಪರಮ ಕೃಪೆ ಮತ್ತು ಅನುಗ್ರಹವೇ ಹೊರತು ನಿಗ್ರಹವಲ್ಲ. ಇವನ ಮನೆಯಲ್ಲಿ ಭಗವದವತಾರವಾದ್ದರಿಂದಲೂ ಮತ್ತು ಇವನ ಪುತ್ರ ಪ್ರಹ್ಲಾದ ಮಹಾಭಾಗವತ ನಾದ್ದರಿಂದ ಹಿರಣ್ಯನು ಮಹಾಸುರನಾದನು. ಭಗ ವಂತನಲ್ಲಿರುವ ಅಖಿಲಕಲ್ಯಾಣಗುಣಗಳು ಪ್ರಹ್ಲಾದ ನಲ್ಲಿಯೂ ಇರುವುದರಿಂದ ವಿಶ್ವನೆಲ್ಲವೂ ಪ್ರಹ್ಲಾ ದನ ವೃತ್ತಾಂತ ಚರಿತ್ರೆಯಲ್ಲಿ ತಲ್ಲೀನವಾಯಿತು. ಇದೊಂದು ಮೋಕ್ಷಸಾಧನೆ. ಇಂತಹ ಪರಮ ಭಕ್ತನನ್ನು ಕಾಣಲು ಅಹೋಬಿಲದಲ್ಲಿ ಪ್ರತಿ ಯೊಂದು ಕಂಬದಲ್ಲಿ ಕಾದು ಕುಳಿತಿರುವನು ನೃಸಿಂಹ. ಅವನೂ ತ್ರೀನೇತ್ರಧಾರಿ. ಇದು ಪ್ರಹ್ಲಾದನಿಗೆ ಮಾತ್ರ ಗೋಚರವಾಗಿ 'ಮಾಲೋಲ ಕಣ್ಣನ್' ಎಂದು ಕರೆಯಲ್ಪಟ್ಟಿದ್ದಾನೆ ನೃಸಿಂಹ. ಅಹೋಬಿಲ ನರಸಿಂಹನೂ ಸಹ 'ಪೆರಿಯ ಪೆರು ಮಾಳ್' ಮತ್ತು ಎಲ್ಲಾ ಅವತಾರಗಳಿಗಿಂತ ಇದು ಶ್ರೇಷ್ಠಾವತಾರ ಎಂದು ತಿರುಪತಿ ಶ್ರೀನಿವಾಸನೆ ಸ್ವತಃ ಹೇಳಿರುವನು, ತನ್ನ ಕಲ್ಯಾಣಕ್ಕೆ ಅಹೋ ಬಿಲ ಲಕ್ಷ್ಮೀನೃಸಿಂಹರನ್ನು ಆಹ್ವಾನಿಸಿದ್ದಾನೆ. ವಿಷ್ಣು ಸಹಸ್ರನಾಮನೆಲ್ಲವೂ ನೃಸಿಂಹನಿಗೆ ಸಲ್ಲು ವುದು.

## ರಾಮಾವತಾರ

ಇದು ಹೆಚ್ಚು ಆಕರ್ಷಕವಾಗಿಯೂ ಮತ್ತು ಬೋಧಕವಾಗಿಯೂ ಇದೆ. ಹಿಂದೂಗಳ ನಿತ್ಯ ಜೀವನದಲ್ಲಿ ರಾಮಾಯಣ ಗ್ರಂಥ, ರಾಮನಾಮ, ರಾಮನ ಆದರ್ಶ ಜೀವನ, ಜೀವನಧರ್ಮ, ರಾಜ ಧರ್ಮ-ಇತ್ಯಾದಿಗಳ ಮಹತ್ವಪೂರ್ಣ ಪ್ರಭಾವ ವನ್ನು ಬೀರಿರುತ್ತದೆ. ಉದಾಃ ರಾಮರಾಜ್ಯವೆಂಬ ಸುಭಿಕ್ಷ ಪರಿಸ್ಥಿತಿ ಜಗತ್ತಿಗೆ ಆದರ್ಶವಾಗಿದೆ.

ಶಿಶುವಿನ ರೂಪ, ಕಾಂತಿ ಮತ್ತು ತೇಜಸ್ಸನ್ನು ನೋಡಿದ ವಸಿಷ್ಠರು ಸ್ವಯಂಪ್ರೇರಿತರಾಗಿ 'ರಾಮ' ಎಂದರು. ರಾಮ ಎಂದರೆ 'ಪ್ರಥಮ ಮಂಗಳ' ಎಂದರ್ಥ.

ರಾಮ ಇತ್ಯಾಭಿರಾಮೇಣ
ವಪುಷಾ ತಸ್ಯ ಚೋದಿತಃ
ನಾಮಧೇಯಂ ಗುರುಶ್ಚಕ್ರೇ
ಜಗತ್ಪ್ರಥಮ ಮಂಗಳಂ

(ಕಾಳಿದಾಸನ ರಘುವಂಶ)

ಈ ಎರಡಕ್ಷರಗಳು ಎಲ್ಲಾ ಮಂತ್ರಗಳಿಗೂ ಪ್ರಾಣದಂತಿದೆ. ಅಷ್ಟಾಕ್ಷರೀ ಮತ್ತು ಪಂಚಾಕ್ಷರೀ ಗಳಲ್ಲಿ ಇವು ಬೀಜಾಕ್ಷರಗಳಾಗಿವೆ. 'ಮರ' ಎಂದು ರಾಮನಾಮವನ್ನು ಉಚ್ಚರಿಸಿ ವಾಲ್ಮೀಕಿಗಳು ಬ್ರಹ್ಮಋಷಿಗಳಾಗಲಿಲ್ಲವೆ? ರಾಮನು ಒಬ್ಬ ಋಷಿ ಪತ್ನಿಯಾದ ಅಹಲ್ಯೆಯನ್ನು ಉದ್ಧರಿಸಿದರೆ ರಾಮನಾಮವು ಜೀವಕೋಟಿಯನ್ನೇ ಉದ್ಧರಿಸು ವುದು. ಇದು ತಾರಕಮಂತ್ರ ಮತ್ತು ಜನ್ಮ ರಕ್ಷಕ ಮಂತ್ರ. ಆದ್ದರಿಂದ ರಾಮನಿಗಿಂತ ರಾಮ ನಾಮಕ್ಕೆ ಹೆಚ್ಚು ಹಿರಿಮೆ.

ಈ ಅವತಾರದಲ್ಲಿ ರಾಮನು ಅನೇಕ ಸನ್ನಿವೇ ಶಗಳಲ್ಲಿ ಮನುಷ್ಯನಂತೆ ನಟಿಸಿ ವ್ಯವಹರಿಸುವುದು ಕಂಡು ಬರುತ್ತದೆ.

ಮಾಯಾವಿಡಂಬನಮ್
ದೇಹಿ ಯಥಾ ನಟಸ್ಯ —ಶುಕ್ಲಾಚಾರ್ಯ

ತಾಯಿ ಮತ್ತು ತಮ್ಮಂದಿರಿಂದ ಎಷ್ಟೇ ವಿರೋಧ ಬಂದರೂ ಕೈಕೇಯಿಗೆ ತಾನು ಮಾತು ಕೊಟ್ಟಂತೆ ವನವಾಸಕ್ಕೆ ಹೋಗುವುದು ಖಂಡಿತ ಎಂದು ಘೋಷಿಸುವನು.

"ಒಮ್ಮೆ ನಾನು ಆಡಿದ ಮಾತಿನಿಂದಲೇ ಅರ್ಥಿಗಳ ಅಪೇಕ್ಷಿತಾರ್ಥಗಳು ಸಿದ್ಧಿಸುವುವು" ಎಂದು ರಾಮನೇ ಸ್ವತಃ ಹೇಳಿರುವನು. ಇದರಿಂದ 'ಸತ್ಯವಾದೀ ಚ ರಾಘವಃ' ಎಂಬ ಲೋಕೋಕ್ತಿ ಬೆಳಕಿಗೆ ಬಂತು.

ಒಕಮಾಟ, ಒಕಬಾಣಂ, ಒಕಪತ್ನಿ
—ತ್ಯಾಗರಾಜರು

ಋಷಿಗಳು ರಾಮನ ರೂಪಕ್ಕೆ ಮಾರುಹೋಗಿ "ಶ್ರೀರಾಮ ನಮ್ಮನ್ನೆಲ್ಲಾ ಸ್ತ್ರೀಯರನ್ನಾಗಿ ಮಾಡಿ ಆಲಿಂಗನವನ್ನು ಕೊಡು" ಎಂದು ಕೇಳಲು, ರಾಮನು ಇವರ ಕೋರಿಕೆಯನ್ನು ನಿರಾಕರಿಸು ವನು.ನನ್ನದು ಏಕಪತ್ನೀವ್ರತ ಮುಂದಿನ ಜನ್ಮದಲ್ಲಿ ನಿಮ್ಮಬಳಿಯಲ್ಲೆ ಸದಾ ಇರುವೆನು, 'ಪುನರ್ವಸು' ಎಂದು ಅಭಯವನ್ನು ಕೊಡುವನು.

ನನ್ನಲ್ಲಿ ಯಾರು ಒಮ್ಮೆ ಶರಣಾಗುವರೋ ಅವರಿಗೆ ಅಭಯ ನೀಡಿ ರಕ್ಷಿಸುವುದೇ ನನ್ನ ವ್ರತ ವಾಗಿದೆ.

ಸಕೃದೇವ ಪ್ರಪನ್ನಾಯ
ತವಾಸ್ಮೀತಿ ಚ ಯಾಚತೇ।
ಅಭಯಂ ಸರ್ವಭೂತೇ ಭ್ಯೋ
ದದಾಮ್ಯೇತದ್ವ್ರತಂ ಮಮ॥

ಎಂದು ಸೂರ್ಯಕುಲರತ್ನವಾದ ಆ ರಾಘವ ಸಿಂಹನೇ ಸ್ವತಃ ಹೇಳಿ ತನ್ನ ರಕ್ಷಕತ್ವವನ್ನು ಮೆರೆದ.'ಶರಣಾಗತನಲ್ಲಿ ದೋಷವಿದ್ದರೂ ಕೈ ಬಿಡು ವುದಿಲ್ಲ'. ಎಂದು ಹೇಳುವನು. ಸುಗ್ರೀವಾದಿಗಳಿಂದ ಎಷ್ಟೇ ವಿರೋಧ ಬಂದರೂ ಸಹ ವಿಭೀಷಣನಿಗೆ ರಾಮ ಆಶ್ರಯವನ್ನು ಕೊಡುವನು.

ಅಂಗುಳ್ಯಗ್ರೇಣತಾನ್ ಹನ್ಯಾಂ
ಇಚ್ಛನ್ ಹರಿಗಣೇಶ್ವರ (ವಾ.ರಾ.)

ರಾಮನ ಅನೇಕ ಸಾಹಸಗಳಿಂದ ಸುಗ್ರೀವನ ಸಂಶಯ ಪರಿಹಾರವಾಗುವುದು. ರಾಮನ ಕಾರ್ಯಕ್ಕೆ ಸುಗ್ರೀವನು ಬೆರಗಾಗುವನು. ಇತರ ರಾಕ್ಷಸರು ಎಷ್ಟೇ ಬಲಶಾಲಿಗಳಾದರೂ ರಾಮ ಅವರೊಡನೆ ಯುದ್ಧ ಮಾಡುವುದಿಲ್ಲ— ಕಾರಣ ಅವರಾರೂ ರಾಮನಿಗೆ ಸರಿಸಮಾನರಲ್ಲ. ತಕ್ಕ ಕಾರಣಗಳಿಲ್ಲದೆ, ತನ್ನ ವೀರ್ಯವನ್ನು ತಾನು ತೋರುವುದಿಲ್ಲ ಎಂದು ಲಕ್ಷ್ಮಣನೊಡನೆ ಹೇಳು ವನು. ರಾವಣನ ಚದುರಂಗಬಲ ಮತ್ತು ಮೂಲ ಬಲ ರಾಮನಿಂದ ಹತವಾಗಿ, ಸ್ವತಃ ರಾವಣನೆ ಯುದ್ಧಕ್ಕೆ ಸಿದ್ಧನಾಗಿ ಬರುವನು.

ಆಂಡಾಳ್ ತಿರುಪ್ಪಾವೈಯಲ್ಲಿ 'ಕಿಳ್ಳಿ ಕಳೈಂ ದಾನೈ' ಎಂದು ರಾಮನ ಕಾರ್ಯವನ್ನು ಹೊಗ ಳಿದ್ದಾಳೆ. ಇದರರ್ಥ ಹೂಗಳ ಗೊಂಚಲನ್ನು ಉಗು ರಿನಿಂದ ಚಿಗುಟಿ ತೆಗೆಯುವಷ್ಟು ಸುಲಭವಾಗಿ ಆ ದಶಶಿರ ದೈತ್ಯನನ್ನು ಉರುಳಿಸಿದನು. ಆದರೆ ರಾಮ ನಿಗೆ ರಾವಣನನ್ನು ಕೊಲ್ಲಬೇಕೆಂಬ ಹಂಬಲ ಲೇಶಮಾತ್ರವೂ ಇಲ್ಲ, ಇಂದಲ್ಲ ನಾಳೆ ಅವನು ಶರಣಾಗಬಹುದು ಎಂದು ಎಣಿಸಿ, 'ಇಂದು ಹೋಗಿ ನಾಳೆ ಬಾ' ಎಂದು ರಾವಣನಿಗೆ ಹೇಳು ವನು. ರಾಮ 'ಕೂತತ್ತಿನ್ ವಾಯ್ಪಿಳನ್ದ' ಎಂದು ಆಂಡಾಳ್ ಹೇಳುವಳು. ಹಾಗೆ, ರಾವಣನು ತಾನಾಗಿಯೇ ಮೃತ್ಯುವಿನ ಮಡಿಲಲ್ಲಿ ಬೀಳುವನು. ಅವನ ಅಭಿನಿವೇಶವೇ ಅವನ ಮೃತ್ಯುವಿಗೆ ಕಾರ ಣವಾಯಿತು.

ಕಲ್ಯಾಣಗುಣಾಭಿರಾಮನನ್ನು ಮತ್ತು ಅವನ ಧರ್ಮಸ್ವರೂಪವನ್ನು ಶತ್ರುಗಳು ಸಹ ಹೊಗಳಿ ಕೊಂಡಾಡುವರು. 'ಇವನು ಮೂರ್ತಿವೆತ್ತ ಧರ್ಮಸ್ವರೂಪಿ' ಎಂದು ಮಾರೀಚಾದಿಗಳೆ ಹೇಳಿ ರುವರು.

ರಾಮೋವಿಗ್ರಹವಾನ್ ಧರ್ಮಃ, ಸಾಧುಃ ಸತ್ಯ ಪರಾಕ್ರಮಃ, ಎಂದು ಮಾರೀಚನೂ, ಧರ್ಮ ಜ್ಯೋಗುಣವಾನ್‌ದಾಂತಃ ಎಂದು ಕೈಕೇಯಿ ಹೇಳಿರುವರು. ಇದು ರಾಮನ ವ್ಯಕ್ತಿ ಚಿತ್ರಣದ ಒಂದು ಉದಾಹರಣೆ.

'ರಾವಣನ ನಿಧನದಿಂದ ರಾಮನೆ ಲಂಕೆಯನ್ನು ಆಳುವನು' ಎಂಬ ಜನಾಭಿಪ್ರಾಯದಿಂದ ರಾಮ ಸಿಗೆ ಜ್ವರ ಬಂದ ಹಾಗಾಗುವುದು. ವಿಭೀಷಣ ಪಟ್ಟಾಭಿಷೇಕ ದಿಂದ ಈ ಸಮಸ್ಯೆ ಬಗೆ ಹರಿಯು ವುದು.

ಅಭಿಷಿಚ್ಯ ಚ ಲಂಕಾಯಾಂ
ರಾಕ್ಷಸೇಂದ್ರಂ ವಿಭೀಷಣಂ।
ಕೃತಕೃತ್ಯಃ ತದಾ ರಾಮಃ
ವಿಜ್ವರಃ ಪುರುಷೋತ್ತಮಃ॥

ಸಂತುಷ್ಟನಾದ ರಾಮನು ವಿಭೀಷಣನಿಗೆ ಅವನ ಕೋರಿಕೆಯಂತೆ ತನ್ನ ಕುಲಧನವಾದ ಅರ್ಚಾ ಮೂರ್ತಿಯಾದ ಶ್ರೀರಂಗನಾಥನನ್ನು ವಿಮಾನ ಸಹಿತ ಉಡುಗೊರೆಯಾಗಿ ಕೊಡುವನು.

ರಾಜಾ ಲಂಕಾಂ ಪ್ರಾಯಾತ್ ವಿಭೀಷಣಃ

ಅವತಾರ ಅಂತ್ಯದಲ್ಲಿ ರಾಮ ಸರಯೂ ನದಿ ಯನ್ನು ಸೇರಿ ವೈಕುಂಠಕ್ಕೆ ತೆರಳುವನು. ತನ್ನ ಸಂಗಡವಿದ್ದ ಚರಾಚರಗಳಿಗೆಲ್ಲಾ ದಿವ್ಯಗತಿಯನ್ನು ಅನುಗ್ರಹಿಸುವನು. ಆದ್ದರಿಂದ ರಾಮಾವತಾರದ ಮುಖ್ಯೋದ್ದೇಶ ಶರಣಾಗತಿಧರ್ಮಪ್ರವರ್ತನ.

## ಕೃಷ್ಣಾವತಾರ

ಕೃಷ್ಣ ಎಂದರೆ ಆಕರ್ಷಕವಾದದ್ದು ಅಥವ ಎಲ್ಲರ ಮನವನ್ನು ಸೆಳೆಯುವುದು ಎಂದರ್ಥ. ಈ ಶಬ್ದದಲ್ಲಿ ಮಾಧುರ್ಯವಿದೆ. ಕೃಷ್ಣನ ವೃತ್ತಾಂತ ಕಥೆ ಮತ್ತು ಲೀಲೆ ಬಹಳ ಪಾವನವಾದುದು ಮತ್ತು ಅತ್ಯದ್ಭುತವಾದುದು.

ತಮದ್ಭುತಂ ಬಾಲಕಮಂಬುಜೇಕ್ಷಣಂ
—ಭಾಗವತ

ಇದು ಸೌಂದರ್ಯ ಪ್ರಧಾನವಾದ ಅವತಾರ. ಅವತರಿಸು ವಾಗಲೇ ಭಗವಂತನು, ದಿವ್ಯಾಭರಣ, ಆಯುಧಗಳು ಮತ್ತು ಅಲಂಕಾರಸಮೇತ ವಸು ದೇವ ದೇವಕಿಯರಿಗೆ ಪ್ರೈದೋರುತ್ತಾನೆ. ಇವನು ನಾರಾಯಣನ ಪೂರ್ಣಾಂಶವಾದ ಶಕ್ತಿಪುರುಷ ನಾಗಿ ತನ್ನ ಸಂಕಲ್ಪ ಮಾತ್ರದಿಂದಲೆ ಜನಿಸಿದ ಜಗದ್ಗುರು. ಅವತಾರಕ್ರಮದಲ್ಲಿ ಇದೇ ಪೂರ್ಣಾ ವತಾರ. 'ಕೃಷ್ಣಸ್ತು ಭಗವಾನ್ ಸ್ವಯಂ' ಎಂದು ಶುಕಾಚಾರ್ಯರೆ ಭಾಗವತದಲ್ಲಿ ಹೇಳಿದ್ದಾರೆ. ಇದರರ್ಥ ಹೀಗಿದೆ—ಶ್ರೀಕೃಷ್ಣನು ಸಮಸ್ತ ಅಂಶಾ ವತಾರಗಳಿಗೆ ಮೂಲಪುರುಷ ಮತ್ತು ಸರ್ವಾವ ತಾರಬೀಜಸ್ವರೂಪನಾದ ಭಗವಾನ್. ಭಗವ ದ್ಭಕ್ತಿ, ಸಾಮರ್ಥ್ಯವೆಲ್ಲವೂ ಪ್ರಕಾಶಕ್ಕೆ ಬಂದು ಭಗವಂತನು ಇಲ್ಲಿ ಪರಿಪೂರ್ಣ ಶಕ್ತಿ ಪುರುಷನಾ ಗಿರುವನು.

ಈ ಅವತಾರದಲ್ಲಿ ಶ್ರೀಕೃಷ್ಣನು ಧರ್ಮಾನು ಷ್ಠಾನ ಮಾಡುವುದರೊಂದಿಗೆ, ಧರ್ಮೋಪದೇಶ

ಎನ್ನು ಮಾಡಿ ತನ್ನ ಲೀಲಾಚೇಷ್ಟಿತಗಳಿಂದ ಈಶ್ವರತ್ವವನ್ನು ತೋರಿಸುತ್ತಾನೆ. ಈ ಅವತಾರ ಪ್ರಕಟಿತವಾದುದು ಹೇಗೆಂದರೆ;

ರಾಮಾವತಾರದಲ್ಲಿ ಶ್ರೀರಾಮನು ಪುನರ್ವಸು ಎಂದು ಋಷಿಗಳಿಗೆ ವಾಗ್ದಾನ ಮಾಡುವುದು,

ಕಂಸನು ಶಿಶುಹತ್ಯೆ ಮಾಡುತ್ತಿರುವಾಗ ದುರ್ಗೆಯಿಂದ ಆಶರೀರವಾಣಿಯಾಗುವುದು. ಇದರ ಸ್ವಾಪದೇಶವೇನೆಂದರೆ, ಜಗತ್ತನ್ನು ಮತ್ತು ತನ್ನ ಭಕ್ತರನ್ನು ಮಾಯೆ ಆವರಿಸುವುದು. ಭಗವತ್ಕಟಾಕ್ಷದಿಂದ ಈ ಮಾಯೆಯ ತೆರೆ ಸರಿಯುವುದು.

ನಮ್ಮ ಕೃಷ್ಣ – ಎಂದು ಆಂಡಾಳ್, ನಮ್ಮ ಮುದ್ದು ಕೃಷ್ಣ, ಪುರಂದರ ವಿಠಲ-ಎಂದು ಪುರಂದರ ದಾಸರು, ಮೀರಾ ಕೆ ಪ್ರಭು–ಎಂದು ಮೀರಾ ಬಾಯಿ, ಸಂತಶ್ರೇಷ್ಠರಾದ ನಮ್ಮಾಳ್ವಾರ್ ಚೈತನ್ಯ ಪ್ರಭು ಇತ್ಯಾದಿ – ಶ್ರೀಕೃಷ್ಣನನ್ನು ದೇವರನಾಮ, ಶ್ಲೋಕ ಸಂಕೀರ್ತನಾದಿಗಳಿಂದ ಕೊಂಡಾಡಿದ್ದಾರೆ.

ಕೃಷ್ಣಾವತಾರದ ಪರಮ ಪ್ರಯೋಜನ ಗೀತೋಪದೇಶ, ಜನರ ಮೋಹಾಂಧಕಾರ ನಿವಾರಣೆ ಮತ್ತು ಚರಮಶ್ಲೋಕ ಅವತಾರ.

ದ್ವಾಪರಯುಗದಲ್ಲಿ ಬೆಳೆದು ನಿಂತಿದ್ದ ಅಸುರ ಪುಂಡಗುಂಪುಗಳನ್ನು ನಾಶಮಾಡಿ ಧರ್ಮ ಸಂಸ್ಥಾಪನೆಯನ್ನು ಮಾಡಲು ಕಂಕಣಬದ್ಧನಾಗಿ ನಿಂತ ಮಹಾನುಭಾವ ಶ್ರೀಕೃಷ್ಣ. ಕೌರವ–ಪಾಂಡವರ ಸಮರ ಕೇವಲ ನೆಪ ಮಾತ್ರ. ಈ ನೆಪದಿಂದ ಗೀತೋಪದೇಶ ಮಾಡಿ ಶ್ರೀಕೃಷ್ಣನು ಗೀತಾಚಾರ್ಯನಾದನು. ಕುರುಕ್ಷೇತ್ರವೇ ಗೀತೆಯ ಪ್ರಯೋಗಶಾಲೆ. ಇವೆಲ್ಲವು ಅವನ ಸಂಕಲ್ಪ.

ಸರ್ವ ಧರ್ಮಾನ್ ಪರಿತ್ಯಜ್ಯ
ಮಾಮೇಕಂ ಶರಣಂ ವ್ರಜ।
ಅಹಂ ತ್ವಾ ಸರ್ವ ಪಾಪೇಭ್ಯೋ
ಮೋಕ್ಷಯಿಷ್ಯಾಮಿ ಮಾಶುಚಃ॥

ಎಂದು ಬೋಧಿಸಿ "ನನ್ನಲ್ಲಿ ಶರಣು ಹೋಗು ಇಲ್ಲವೇ ನಾಶ ಹೊಂದುವಿ" ಎಂದು ಕಡ್ಡಾಯ ಪಡಿಸುವನು ಶ್ರೀಕೃಷ್ಣ.

"ರಾಮ ನಡೆದಂತೆ ನಡೆ, ಕೃಷ್ಣ ನುಡಿದಂತೆ ಮಾಡು" ಎಂಬ ನಾಣ್ಣುಡಿಗೆ ನಾವೆಲ್ಲರು ಬದ್ಧರಾಗಿದ್ದೇವೆ. ಶ್ರೀಕೃಷ್ಣನು ವಿಭವರೂಪದಲ್ಲಿ ಗೀತ ಗೋವಿಂದನಾಗಿ ಇಡೀ ವಿಶ್ವಕ್ಕೆ ಬೋಧನೆ ಮಾಡಿದ, ದೈವಾಂಶದಿಂದ ಬಾಲ್ಯ ಚೇಷ್ಟಿತಗಳ ಮೂಲಕ ಅತ್ಯದ್ಭುತ ಲೀಲೆಗಳನ್ನು ಮಾಡಿ ತೋರಿಸಿದ; ಶಿಶುವು ದೈತ್ಯ ಸಂಹಾರ ಮಾಡುವುದು, ಮಲ್ಲ ಯುದ್ಧ ಮಾಡುವುದು, ಕುವಲಯಾಪೀಡನೆಂಬ ಮದಗಜವನ್ನು ಸಂಹಾರ ಮಾಡುವುದು, ಒಂದೇ ಬೆರಳಿನಿಂದ ಗೋವರ್ಧನ ಗಿರಿಯನ್ನು ಎತ್ತಿ ಹಿಡಿಯುವುದು, 16 ಸಾವಿರ ಗೋಪಿಕಾ ಸ್ತ್ರೀಯರ ಸಂಗ, ಬಾಯಲ್ಲಿ ಬ್ರಹ್ಮಾಂಡ ತೋರಿಸುವುದು –ಇತ್ಯಾದಿ ಮಾನವನಿಂದ ಮಾಡಲು ಅಸಾಧ್ಯ. ಆದ್ದರಿಂದ ಕೃಷ್ಣನು ಮಾಡಿದ್ದನ್ನು ಮಾಡಬೇಡ ಹೇಳಿದ್ದನ್ನು ಮಾಡು ಎಂಬ ಮಾತು ಬೆಳಕಿಗೆ ಬಂತು.

ಭಗವದವತಾರಗಳನ್ನು ಹಿಂದೂಗಳೂ ಹಬ್ಬ, ಹರಿದಿನ, ಜಯಂತ್ಯುತ್ಸವಗಳಾಗಿ ಆಚರಿಸುವರು. ಜಯಂತಿ ಎಂದರೆ ಕೃಷ್ಣನಿಗೇ ಅನ್ವಯಿಸುವುದು. ಅಷ್ಟಮೀ ತಿಥಿ ಮತ್ತು ರೋಹಿಣೀ ನಕ್ಷತ್ರ ಇವೆರಡರ ಮಿಲನದ ಶುಭಮುಹೂರ್ತಕ್ಕೆ ಜಯಂತಿ ಎಂದ ಹೆಸರು. ಶ್ರೀ ವೈಷ್ಣವರಿಗೆ ಬಹು ದೊಡ್ಡ ಹಬ್ಬವಾದ ಈ ಜಯಂತಿಯು 10 ದಿನಗಳು ಕೃಷ್ಣ ಮಹೋತ್ಸವವಾಗಿ ವಿಜೃಂಭಣೆಯಿಂದ ಎಲ್ಲಾ ದಿವ್ಯ ಕ್ಷೇತ್ರಗಳಲ್ಲಿ ಜರುಗುವುದು.

# ಪ್ರಾಚೀನ ಭಾರತದ ವಿದ್ಯಾಕೇಂದ್ರಗಳು

ಪ್ರಾಚೀನ ಭಾರತದಲ್ಲಿ ವಿದ್ಯಾಭ್ಯಾಸಕ್ಕೆ ಹೆಸರಾದ ಗುರುಕುಲ ಹಾಗೂ ಆಶ್ರಮಗಳ ಶಿಕ್ಷಣ ಪದ್ಧತಿಗಳು ಜನರ ಧಾರ್ಮಿಕ, ಸಾಂಸ್ಕೃತಿಕ ಜೀವನವನ್ನು ರೂಪಿಸುವುದರಲ್ಲಿ ಮಹತ್ವದ ಸ್ಥಾನವನ್ನು ಪಡೆದಿದ್ದುವು. ಭಾರತೀಯ ಸಂಸ್ಕೃತಿ ಹಾಗೂ ಕಲೆಗಳು ಋಷಿಗಳ ಆಶ್ರಮದ ಶಿಕ್ಷಣದಿಂದಲೆ ಪ್ರಾರಂಭವಾಯಿತೆಂದು ವಿಶ್ವಕವಿ ರವೀಂದ್ರರು ಹೇಳಿದ್ದನ್ನು ಇಲ್ಲಿ ಜ್ಞಾಪಿಸಬಹುದು. ಹಿಂದೂಗಳ ಪವಿತ್ರಗ್ರಂಥವಾದ ಭಗವದ್ಗೀತೆಯು "ನಹಿ ಜ್ಞಾನೇನ ಸದೃಶಂ" ಎಂದು ನೈಜ ಶಿಕ್ಷಣದ ಅವಶ್ಯಕತೆಯನ್ನು ಒತ್ತಿಹೇಳಿದೆ. ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸಿ ಜ್ಞಾನವೆಂಬ ಪ್ರಕಾಶವನ್ನು ಪಡೆಯುವುದೇ ಪ್ರಾಚೀನ ಭಾರತದ ಶಿಕ್ಷಣ ಪದ್ಧತಿಯ ಆದರ್ಶವಾಗಿದ್ದಿತು. ಭಾರತೀಯರು ಐಹಿಕಸುಖವನ್ನು ಪಡೆದು ಸುಖಲೋಲುಪ್ತರಾಗಲು ಇಷ್ಟಪಡದೆ, ಇಹಪರ ಸುಖದೊಡನೆ ಮೋಕ್ಷಸಾಧನೆಯೂ ಅವರ ಗುರಿಯಾಗಿಟ್ಟುಕೊಂಡರು. ಯೋಗಾಭ್ಯಾಸದ ಮೂಲಕ ಇಂದ್ರಿಯನಿಗ್ರಹ ಹಾಗೂ ತಪಸ್ಸಿನ ಮೂಲಕ "ಸಿದ್ಧಿ" ದೊರೆಯುವುದೆಂದು ಹಿರಿಯರು ನಂಬಿದ್ದರು. ಅಂದಿನ ಯುಗವು ಸತ್ಯಾನ್ವೇಷಣೆಯ ಯುಗವಾಗಿದ್ದು ಜೀವನ್ಮರಣ ಇವೆರಡರ ಸಮಸ್ಯೆಗೆ ಪರಿಹಾರ ದೊರಕಿಸಿಕೊಳ್ಳುವುದೂ ಜೀವಿಸುವುದರ, ಮುಖ್ಯ ಉದ್ದೇಶವಾಗಿದ್ದಿತು. ಇದನ್ನು ಈಡೇರಿಸಿಕೊಳ್ಳಲು ಪ್ರಾಚೀನ ಶಿಕ್ಷಣಕ್ರಮವು ಸಾಧನವಾಯಿತು. ಮಾನವನನ್ನು ಸಂಪೂರ್ಣ ಆಧ್ಯಾತ್ಮಿಕ ಪರಿಪೂರ್ಣದೆಡೆಗೆ ಸಾಗಿಸುವತ್ತ ಗುರುಕುಲ ಹಾಗೂ ಆಶ್ರಮಗಳು ಮಹತ್ತರ ಪಾತ್ರವಹಿಸಿದವು. "ವಿದ್ಯೆಯನಾಡು, ಸಂಸ್ಕೃತಿಯ ಬೀಡು" ಎಂದು ಹೆಸರಾದ ಭಾರತ ಕಲೆ, ವಿಜ್ಞಾನ, ಸಾಹಿತ್ಯ ತತ್ತ್ವಜ್ಞಾನಗಳಲ್ಲಿ ತನ್ನ ಪಾತ್ರವನ್ನು ಪ್ರಾಚೀನಋಷಿಗಳ ಕಾಲದಿಂದಲೂ ಕಾಯ್ದಿರಿಸಿಕೊಂಡು ಬಂದಿದೆ. ಗುರುಶಿಷ್ಯರ ನಿಕಟ ಸಂಪರ್ಕವೇ ಅಂದಿನ ಶಿಕ್ಷಣ ಪದ್ಧತಿಯ ತಿರುಳಾಗಿದ್ದಿತು. ಗುರುಶಿಷ್ಯರು ತಮ್ಮ ಆಶ್ರಮ ಅಥವಾ ಗುರುಕುಲಗಳಲ್ಲಿಯೇ ವಾಸ್ತವ್ಯವನ್ನು ಮಾಡುವ ಪದ್ಧತಿಯ ಪ್ರಾಚೀನ ಶಿಕ್ಷಣ ಸಂಪ್ರದಾಯವಾಗಿತ್ತು. ಅಲ್ಲಿಂದೀಚೆಗೆ ಅನೇಕ ವಿದ್ಯಾಪೀಠಗಳೂ ವಿಶ್ವವಿದ್ಯಾನಿಲಯಗಳೂ ಬೆಳೆಯುತ್ತ ಬಂದವು.

ವೇದ ಉಪನಿಷತ್ತು ಹಾಗೂ ಇತಿಹಾಸಯುಗ ಆರಂಭವಾದ ಮೇಲೆ ಭಾರತದಲ್ಲಿ ಅನೇಕ ವಿದ್ಯಾಪೀಠಗಳೂ ವಿಶ್ವವಿದ್ಯಾಲಯಗಳೂ [illegible]ಯಲ್ಲಿದ್ದುವು. ಉಪನಿಷತ್ಕಾಲದಲ್ಲಿ ಋಷಿಗಳ ಆಶ್ರಮಗಳು ವಿಚಾರಕೇಂದ್ರಗಳಾಗಿದ್ದವು. ಕ್ರಮೇಣ ವಿದ್ಯಾಪೀಠ, ಮಠ, ಮಂದಿರಗಳು ವಿಶ್ವವಿದ್ಯಾಲಯಗಳು ವಿಚಾರಕೇಂದ್ರಗಳಾಗುತ್ತ ಬಂದವು. ಪ್ರಾಚೀನಭಾರತದ ಪ್ರಸಿದ್ಧ ವಿದ್ಯಾಕೇಂದ್ರಗಳೆಂದರೆ ನಲಂದಾ, ತಕ್ಷಶಿಲಾ, ವಲ್ಲಭಿ ವಿಕ್ರಮಶಿಲಾ, ಜಗದ್ದಳ, ಓದಾಂತಪುರಿ, ಮಿಥಿಲಾ ಉಜ್ಜಯಿನಿ, ವಾರಣಾಸಿ ಮುಂತಾದುವುಗಳು. ಇವುಗಳಲ್ಲದೆ ಬ್ರಹ್ಮಪುರಿ, ಅಗ್ರಹಾರ, ಮಠ ಮಂದಿರಗಳು, ಬೌದ್ಧವಿಹಾರ, ಜೈನಚೈತ್ಯಾಲಯಗಳೂ ವಿದ್ಯಾಕೇಂದ್ರಗಳಾಗಿದ್ದವು. ಬ್ರಹ್ಮಪುರಿ, ಅಗ್ರಹಾರ, ಮಠಮಂದಿರಗಳು ಬ್ರಾಹ್ಮಣರ,ವೇದ ವ್ಯಾಕರಣ ತರ್ಕಶಾಸ್ತ್ರ, ಜ್ಯೋತಿಷ್ಯ, ಉಪನಿಷತ್ತು, ತತ್ತ್ವಶಾಸ್ತ್ರಗಳಿಗೆ ಹೆಸರಾಗಿದ್ದವು. ಭಾರತದ ವಿದ್ಯಾಕೇಂದ್ರಗಳು ದೇಶವಿದೇಶದ ವಿದ್ಯಾರ್ಥಿಗಳಿಂದ ತುಂಬಿ ತುಳುಕುತ್ತಿದ್ದು, ಪ್ರವಾಸಿಗರ ಮನಸ್ಸನ್ನು ಸೂರೆಗೊಳ್ಳುತಿದ್ದುವು.

ಗುರುವೆಂದರೆ ಮಾರ್ಗದರ್ಶಕ ಹಾಗೂ ಸದ್ಬೋಧಕ. ಆತನ ಪಾದ ತಲದಲ್ಲಿ ಕುಳಿತು ವಿದ್ಯೆ ಕಲಿತರೆ ಇಹಪರ ಸೌಖ್ಯಗಳೆರಡೂ ಲಭ್ಯವಾಗುತ್ತವೆ ಎಂಬುದು ಶಿಷ್ಯರ ನಂಬಿಕೆಯಾಗಿತ್ತು. ಗುರುವಿನ ಸ್ಮರಣೆ ಮಾತ್ರದಿಂದಲೇ ಎಲ್ಲ ತೊಂದರೆಗಳೂ ಪರಿಹಾರ ವಾಗುತ್ತಿದ್ದವು. ಮಾತೃದೇವೋಭವ, ಪಿತೃದೇವೋಭವ, ಆಚಾರ್ಯದೇವೋಭವ, ಎಂಬ ಪ್ರಾಚೀನ ಉಕ್ತಿಗಳು ಆಶ್ರಮಗಳ, ಗುರುಕುಲ ವಿದ್ಯಾಭ್ಯಾಸಪದ್ಧತಿಗಳಲ್ಲಿ ಹೆಚ್ಚು ಪ್ರಚಲಿತವಾಗಿವೆ. ಜನ್ಮ ನೀಡಿದ ತಂದೆ,ತಾಯಿಗಳು, ಜಗತ್ತಿನಲ್ಲಿ ಮನುಷ್ಯನಾಗಿ ಬಾಳಲು ವಿದ್ಯೆ, ಬುದ್ಧಿ, ಸನ್ಮಾರ್ಗಗಳನ್ನು ಕೊಟ್ಟ ಗುರುಗಳು ದೇವರಿಗೆ ಸಮಾನ ಎಂಬುದು ಈ ಉಕ್ತಿಗಳ ಸಾರವಾಗಿದೆ. "ವರ್ಣಮಾತ್ರಂ ಕಲಿಸಿದಾತಂ ಗುರು"–ಅಂದರೆ ಜೀವನದಲ್ಲಿ ಒಂದು ಅಕ್ಷರವನ್ನು ಕಲಿಸಲು ಕಾರಣನಾದವನೂ ಗುರುವಾಗುವನಲ್ಲದೆ ದೇವರಿಗೆ ಸಮಾನ ಎಂಬ ಗೌರವವನ್ನು ಪಡೆಯುವನು.

## ತಕ್ಷಶಿಲಾ :

ತಕ್ಷಶಿಲಾವಿದ್ಯಾಕೇಂದ್ರವು ಪ್ರಾಚೀನ ವಿದ್ಯಾಕೇಂದ್ರಗಳಲ್ಲಿ ಒಂದಾಗಿದೆ. ಶ್ರೀರಾಮಚಂದ್ರನ ಸಹೋದರನಾದ ಭರತನ ಮಗ ತಕ್ಷಕನಿಂದ ಈ ನಗರವು ನಿರ್ಮಾಣವಾಯಿತೆಂದು ಪುರಾಣಗಳು ಸಾರುತ್ತವೆ. ಅವನು ತಕ್ಷಶಿಲಾ ನಗರವನ್ನು ತನ್ನ [illegible] ಪುರಾಣಗಳಲ್ಲಿ ರಾಜಧಾನಿಯಾಗಿ ಮೆರೆದ ಈ ನಗರವು ವಿದ್ಯೆಯನ್ನು ಅರಸುತ್ತ ಬಂದ ವೈದಿಕ ಶಿಷ್ಯೋತ್ತಮರಿಗೆ ಹಿಂದೂಧರ್ಮದ ಜ್ಞಾನಧಾರೆಯನ್ನು ಎರೆಯುವ ಪ್ರಮುಖ ಕೇಂದ್ರವಾಯಿತು. ಅನೇಕ ರಾಜಕುಮಾರರೂ ಸೇರಿದಂತೆ ಹಲವಾರು ಮಂದಿ ಪ್ರಸಿದ್ಧ ವ್ಯಕ್ತಿಗಳು ಇಲ್ಲಿ ಶಿಕ್ಷಣವನ್ನು ಪಡೆದರು. ಚಾಣಕ್ಯ ಅಥವಾ ಕೌಟಿಲ್ಯನು ಇಲ್ಲಿ ಅಧ್ಯಾಪಕನಾಗಿದ್ದನು. ವೇದೋಪನಿಷತ್ತುಗಳನ್ನು ಇಲ್ಲಿ ಬೋಧಿಸುತ್ತಿದ್ದರಲ್ಲದೆ ವೈದ್ಯಕೀಯ ಶಿಕ್ಷಣಕ್ಕೆ ಪ್ರಮುಖ ಕೇಂದ್ರವೂ ಆಗಿ ಮೆರೆಯಿತು.

## ಮಿಥಿಲಾ :

ಮಿಥಿಲಾಪುರಿಯು ಜನಕರಾಜನ ಕಾಲದಿಂದಲೂ ವೈದಿಕ ಶಿಕ್ಷಣಕ್ಕೆ ಹೆಸರಾಗಿತ್ತು. ಕ್ರಿ.ಶ. ಹದಿಮೂರನೇ ಶತಮಾನದಿಂದ 15ನೇ ಶತಮಾನದವರೆಗೆ ಆಳಿದ ಕಾಮೇಶ್ವರ ಅರಸು ಸಂತತಿಯವರು ವಿದ್ಯಾಪೋಷಕರಾಗಿದ್ದರು. "ಜಗದ್ಧರ" ಎಂಬ ವಿದ್ವಾಂಸನು ಗೀತೆ, ದೇವೀ ಮಹಾತ್ಮ್ಯೆ, ಮೇಘದೂತ, ಗೀತಗೋವಿಂದ, ಮಾಲತೀಮಾಧವ ಮುಂತಾದ ಕೃತಿಗಳ ಮೇಲೆ ಭಾಷ್ಯವನ್ನು ಬರೆದನು. "ವಾಚಸ್ಪತಿ ಮಿಶ್ರ"ನೆಂಬವನು "ನ್ಯಾಯಸೂತ್ರಾಧಾರ, ಖಂಡನ ಖಂಡಾಧಾರ, ಅನುಮಾನಖಂಡಟೀಕಾ, ನೀತಿ ಚಿಂತಾಮಣಿ" ಮೊದಲಾದುವನ್ನು ಬರೆದನು. ಇಲ್ಲಿ ಪದವೀಧರನಾಗುವವನು "ಸಲಾಕಾ" ಎಂಬ ಪ್ರವೇಶ ಪರೀಕ್ಷೆಯಲ್ಲಿ ತೇರ್ಗಡೆಯಾಗಬೇಕಾಗಿದ್ದಿತು.

## ನಲಂದಾ :

ನಲಂದಾವು ಹಿಂದೂ, ಜೈನ, ಬೌದ್ಧ ಯಾತ್ರಾಸ್ಥಳವಾಗಿತ್ತು. ಬೌದ್ಧರ ಕಾಲದಲ್ಲಿ ಇದು ಪ್ರಮುಖ ವಿದ್ಯಾಕೇಂದ್ರವಾಗಿ ಮೆರೆಯಿತು. ಪ್ರಾಚೀನ ಭಾರತದ ವಿದ್ಯಾಪೀಠಗಳಲ್ಲಿ ಇದು ಅತೀ ಪ್ರಸಿದ್ಧವಾದುದು. ಕ್ರಿ.ಶ. 7ನೇ ಶತಮಾನದಲ್ಲಿ ಇಡೀವಿಶ್ವದಲ್ಲೇ ಅತೀದೊಡ್ಡ ವಿದ್ಯಾಕೇಂದ್ರವಾಗಿ ಮೆರೆಯಿತು. ಚೀನೀ ಬೌದ್ಧ ಯಾತ್ರಿಕ ಹ್ಯೂಎನ್‌ತ್ಸಾಂಗನು ಈ ವಿದ್ಯಾಪೀಠದ ಬಗ್ಗೆ ಚೆನ್ನಾಗಿ ಹೊಗಳಿದ್ದಾನೆ. ವರ್ತಕರಿಂದ ಬುದ್ಧನಿಗೆ ಕಾಣಿಕೆಯಾಗಿ ಬಂದ

ಶ್ರೀ ಗಣಪತಿಭಟ್

...ಯಲ್ಲಿ ಗುಪ್ತರು ವಿದ್ಯಾಕೇಂದ್ರವನ್ನು ನಿರ್ಮಿಸಿ ಪಕ್ಷಿ ಶ್ರಮಪಟ್ಟು ಯಶಸ್ಸನ್ನು ಪಡೆದರು. ಇದನ್ನು 5ನೇ ಶತಮಾನದಲ್ಲಿ ಸ್ಕಂದಗುಪ್ತನು ಸ್ಥಾಪಿಸಿದನೆಂದು ಇತಿಹಾಸವು ಸಾರುತ್ತದೆ. ಹ್ಯೂಎನ್‌ತ್ಸಾಂಗನು ಭಾರತವನ್ನು ಸಂದರ್ಶಿಸಿದ ಕಾಲದಲ್ಲಿ ಹರ್ಷ ಚಕ್ರವರ್ತಿಯು ವಿಶ್ವವಿದ್ಯಾನಿಲಯದ ಏಳಿಗೆಗಾಗಿ ದುಡಿಯುತ್ತಿದ್ದನಲ್ಲದೆ ರಾಜನ ಔದಾರ್ಯದ ಫಲವಾಗಿ ಎಲ್ಲಾ ವಿದ್ಯಾರ್ಥಿಗಳು ಅಶನ, ವಸನ, ಔಷಧಿ ಮುಂತಾದವುಗಳನ್ನು ಧರ್ಮಾರ್ಥವಾಗಿ ಪಡೆಯುತ್ತಿದ್ದರು. ಬಾಲಪುತ್ರನೆಂಬ ದೊರೆಯು ಇಲ್ಲಿ ಬೌದ್ಧ ಮಠಗಳನ್ನು ಸ್ಥಾಪಿಸಿದನು. ದೇಶ ವಿದೇಶಗಳ ವಿದ್ಯಾರ್ಥಿಗಳು ಇಲ್ಲಿ ವಿದ್ಯಾಭ್ಯಾಸ ಪಡೆಯುತ್ತಿದ್ದರು. ನಳಂದಾ ವಿಶ್ವವಿದ್ಯಾನಿಲಯದಲ್ಲಿ ಹತ್ತುಸಾವಿರ ವಿದ್ಯಾರ್ಥಿಗಳೂ, ಸಾವಿರದ ಐನೂರ ಮಂದಿ ಪ್ರಾಧ್ಯಾಪಕರೂ ಇದ್ದರು. ಅಂದಿನ ಸ್ನಾತಕೋತ್ತರ ಕೇಂದ್ರವೆಂದು ಹೆಸರು ಪಡೆಯಿತು. ವಿಶ್ವವಿದ್ಯಾನಿಲಯದಲ್ಲಿ ವಿದ್ಯಾರ್ಥಿಗಳಿಗೆ ಪ್ರವೇಶ ದೊರೆಯಬೇಕಾದರೆ ಕಠಿಣವಾದ ಪ್ರವೇಶ ಪರೀಕ್ಷೆಯು ತೇರ್ಗಡೆಯಾಗಬೇಕಿತ್ತು. ಅಂದಿನ ಪರೀಕ್ಷೆಗಳಲ್ಲಿ ಶೇಕಡಾ 30 ರಷ್ಟು ಮಂದಿ ತೇರ್ಗಡೆಯಾಗಿ ಪ್ರವೇಶ ಪಡೆದು ಉತ್ತಮ ಪಂಡಿತರಾಗಲು ಸಾಧ್ಯವಾಗುತ್ತಿತ್ತು. ಅಂದಿನ ಪಠ್ಯಕ್ರಮದಲ್ಲಿ ವೇದಗಳು, ಯೋಗಶಾಸ್ತ್ರ, ನ್ಯಾಯ, ತರ್ಕಶಾಸ್ತ್ರ, ಶಬ್ದ ವಿದ್ಯೆ, ಸಂಸ್ಕೃತವ್ಯಾಕರಣ, ಸಾಂಖ್ಯಾಶಾಸ್ತ್ರ, ಅಥರ್ವಣವೇದ ಮುಂತಾದವುಗಳನ್ನು ಕಲಿಸುತ್ತಿದ್ದರು. ಪಾಂಡಿತ್ಯದಲ್ಲೂ, ಚಾರಿತ್ರ್ಯದಲ್ಲೂ ಹೆಸರಾದ ಶೀಲಭದ್ರನು ವಿಶ್ವವಿದ್ಯಾನಿಲಯದ ಕುಲಪತಿಯಾಗಿದ್ದನು. ಧರ್ಮಪಾಲ, ಚಂದ್ರಪಾಲ, ಗುಣಮತಿ, ಸ್ಥಿರಮತಿ, ಪ್ರಭಾಮಿತ್ರ, ಜಿನಮಿತ್ರ, ಜ್ಞಾನಚಂದ್ರ, ಮುಂತಾದವರು ಅಧ್ಯಾಪನದಲ್ಲಿ ವಿದ್ವತ್ತನ್ನು ಪ್ರದರ್ಶಿಸಿ ಇಡಿ ವಿಶ್ವದಲ್ಲೇ ಪ್ರಸಿದ್ಧರಾಗಿ ಮೆರೆದರು. ಮಹಾಯಾನ ಪಂಥದಲ್ಲಿ ಶಿಕ್ಷಣ ನೀಡಿದ ನಲಂದವು ತನ್ನ ಹಿರಿಮೆಯಿಂದ ಅಪಾರ ಯಶಸ್ಸನ್ನು ಗಳಿಸಿತು. ನಲಂದಾದಲ್ಲಿ ರತ್ನಸಾಗರ, ರತ್ನೋದಧಿ ಮತ್ತು ರತ್ನರಂಜಕ ಎಂಬ ಪ್ರಸಿದ್ಧ ಪುಸ್ತಕಭಂಡಾರಗಳಿದ್ದವು. ಸ್ನಾತಕೋತ್ತರ ಶಿಕ್ಷಣಪಡೆದ ಪ್ರಖ್ಯಾತ ವಿದ್ಯಾರ್ಥಿಗಳು, ವಿದ್ವಾಂಸರುಗಳು, ಚೀನಾ, ಟಿಬೆಟ್, ಮುಂತಾದ ಕಡೆ ಬೌದ್ಧಧರ್ಮವನ್ನು ಪ್ರಚಾರ ಮಾಡುತ್ತಿದ್ದರು. ನಲಂದವು ಇಡೀ ಏಷ್ಯಾಖಂಡಕ್ಕೆ ಸಂಸ್ಕೃತಿ ಮತ್ತು ಜ್ಞಾನವನ್ನು ಹರಡುವ ಕೇಂದ್ರವಾಗಿದ್ದಿತು.

## ವಲ್ಲಭಿ :

ನಲಂದಾವು ಮಹಾಯಾನ ಪಂಥಕ್ಕೆ ಹೆಸರಾದರೆ ವಲ್ಲಭಿಯು ಹೀನಯಾನ ಪಂಥದಲ್ಲಿ ಹೆಸರನ್ನು ಪಡೆಯಿತು. ಇಲ್ಲಿ ಹ್ಯೂಎನ್‌ತ್ಸಾಂಗನು ನೂರು ಸಂಘಾರಾಮಗಳನ್ನು ಆರು ಸಾವಿರ ಭಿಕ್ಷುಗಳನ್ನು ನೋಡಿದ್ದನೆಂದು ಚರಿತ್ರೆಯಿಂದ ತಿಳಿಯುತ್ತದೆ. ಇಲ್ಲಿಯೂ ಧರ್ಮ, ನ್ಯಾಯ, ಚಿಕಿತ್ಸಾಶಾಸ್ತ್ರ ಮುಂತಾದುವುಗಳಲ್ಲಿ ಶಿಕ್ಷಣ ನೀಡುತ್ತಿದ್ದರು. ನಲಂದಾದಲ್ಲಿದ್ದಂತೆ ಇಲ್ಲೂ ಸುಸಜ್ಜಿತವಾದ ಶ್ರೇಷ್ಠ ಗ್ರಂಥಾಲಯಗಳಿದ್ದು ಶಿಕ್ಷಣಕ್ಕೆ ಹೆಸರಾಯಿತು. ಉತ್ತಮ ಅಧ್ಯಾಪಕರಿದ್ದು ವಿಶ್ವವಿದ್ಯಾಲಯವು ಅರಸರ ಕೃಪಾಪೋಷಣೆಗಳಿಗೂ ಒಳಗಾಗಿದ್ದಿತು.

## ವಿಕ್ರಮಶಿಲ :

ಮಗಧ ರಾಜ್ಯದ ಉತ್ತರದಲ್ಲಿ ಅರಸನಾದ ಧರ್ಮಪಾಲನು ತನ್ನ ಸ್ನೇಹಿತ ಅರಸರ ನೆರವಿನಿಂದ ವಿಕ್ರಮಶಿಲವೆಂಬ ಶ್ರೇಷ್ಠ ವಿದ್ಯಾಲಯವನ್ನು ಕಟ್ಟಿಸಿದನು. ವಿಕ್ರಮಶಿಲ ಮತ್ತು ನಲಂದಾ ವಿದ್ಯಾಲಯಗಳ ಕಾರ್ಯ ನಿರ್ವಹಣೆಯಲ್ಲಿ ಹೊಂದಾಣಿಕೆ ಉಂಟುಮಾಡಲು ಗಣ್ಯರಾದ ಅಧ್ಯಾಪಕ ಮಂಡಳಿಗಳು ಇದ್ದವು. ಮಂಡಳಿಯ ಅಧೀನದಲ್ಲಿ ಆರು ಕಾಲೇಜುಗಳಿದ್ದು ಪ್ರತಿಯೊಂದರಲ್ಲೂ ನೂರೆಂಟು ಮಂದಿ ಅಧ್ಯಾಪಕರಿದ್ದರು. ಅಲ್ಲಿ ವಿಜ್ಞಾನಭವನವೆಂಬ ಮಂದಿರವಿದ್ದು ವಿದ್ವತ್ತಿನ ಜ್ಞಾನ ಮಟ್ಟವನ್ನು ಪರೀಕ್ಷಿಸಲು ಪಂಡಿತರಿದ್ದರು. ಅವರ ಪ್ರವೇಶ ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ ಮಾತ್ರ ಪ್ರವೇಶದೊರೆಯುತ್ತಿತ್ತು. ರತ್ನಾಕರ, ಶಾಂತಿ, ವಾಗೀಶ್ವರಕೀರ್ತಿ, ನರೋಪ, ಪ್ರಜ್ಞಾನಕರಮತಿ, ರತ್ನವಜ್ರ ಮತ್ತು ಜ್ಞಾನ ಶ್ರೀಮಿತ್ರರೆಂಬ ತರ್ಕಶಾಸ್ತ್ರ ಪಂಡಿತರಿದ್ದರು. ಪಾಂಡಿತ್ಯ, ಧಾರ್ಮಿಕ ಶ್ರದ್ಧೆ, ಶಿಸ್ತುಗಳಲ್ಲಿ ಪರಿಣತರಾದವರು ಸಂಸ್ಥೆಯ ಅಧ್ಯಕ್ಷರಾಗುತ್ತಿದ್ದರು. ಇಲ್ಲಿ ಉತ್ತಮ ವಿದ್ಯಾರ್ಥಿಗಳಿದ್ದು ಟಿಬೆಟ್ ಭಾಷೆಯಲ್ಲಿ ಗ್ರಂಥ ರಚನೆಗಳು ಮಾಡಲ್ಪಡುತ್ತಿದ್ದುವು.

## ನವದ್ವೀಪ :

(ನಾದಿಯಾ) ಮಧ್ಯಯುಗದಲ್ಲಿ ಜ್ಞಾನ ಜ್ಯೋತಿಯನ್ನು ಬೆಳಗಿಸಿದ ವಿದ್ಯಾಕೇಂದ್ರಗಳಲ್ಲಿ ನವದ್ವೀಪವೂ ಒಂದಾಗಿದೆ. ತರ್ಕಶಾಸ್ತ್ರವು ಇಲ್ಲಿಯ ಮುಖ್ಯ ವಿಷಯವಾಗಿತ್ತಲ್ಲದೆ ನ್ಯಾಯಶಾಸ್ತ್ರ ಮತ್ತು ವ್ಯಾಕರಣಗಳೂ ಬೋಧಿಸಲ್ಪಡುತ್ತಿದ್ದವು. ಲಕ್ಷ್ಮಣಸೇನನೆಂಬ ದೊರೆಯ ಕಾಲದಲ್ಲಿ ವಿದ್ಯೆಗೆ ತುಂಬಾ ಪ್ರೋತ್ಸಾಹ ದೊರೆಯಿತು. ಆತನ ಮುಖ್ಯಮಂತ್ರಿಯಾಗಿದ್ದ ಹಲಾಯುಧನು "ಬ್ರಾಹ್ಮಣ ಸರ್ವಸ್ವ", "ಸ್ಮೃತಿ ಸರ್ವಸ್ವ" "ಮೀಮಾಂಸಾ ಸರ್ವಸ್ವ", ಮತ್ತು "ನ್ಯಾಯ ಸರ್ವಸ್ವ" ಗಳೆಂಬ ಶ್ರೇಷ್ಠ ಗ್ರಂಥಗಳನ್ನು ರಚಿಸಿದನು. ನವದ್ವೀಪದ ಖ್ಯಾತಿಯನ್ನು ಹೆಚ್ಚಿಸಿದ ಕವಿಗಳಲ್ಲಿ ಗೀತ ಗೋವಿಂದವನ್ನು ಬರೆದ ಜಯದೇವನೂ, "ಸ್ಮೃತಿವಿವೇಕ"ದ ಕರ್ತೃ ಶೂಲಪಾಣಿಯೂ ಸೇರಿದ್ದಾರೆ. ತರ್ಕ ಶಾಸ್ತ್ರದ ಬೆಳವಣಿಗೆಗೆ ಕಾರಣನಾದವನು ರಘುನಾಥ ಶಿರೋಮಣಿ

# ಕಾವುದೆನ್ನನು

ವೆಂಕಟೇಶಂಗೆ, ಶ್ರೀಸಪ್ತಗಿರಿಯೊಡೆಯಂಗೆ
ಪದ್ಮಾವತೀ ಮನಃಪ್ರಿಯಂಗೆ ಹರಿಗೆ ।
ಭೂಮಿಯೊಳು ವೈಕುಂಠವೆನಿಪ ತಿರುಪತಿವಾಸ
ಶ್ರೀ ವೆಂಕಟೇಶಂಗೆ ಕರವಮುಗಿವೆ ॥ ೧ ॥

ಪರಮಕರುಣಾಕರಧಿ ಭಕುತಜನಪರಿಪಾಲ
ದುರಿತಕಾನನದಾವ ಕಾವಬಂಧು
ಸಂಸಾರ ಸಾಗರೋತ್ತರಣೈಕಸೇತು ನೀ-
ನುದ್ಧರಿಸು; ತವಶರಣು ಕಾವುದೆನ್ನ ॥ ೨ ॥

ಹೇ! ಮಹಾಮಹಿಮ ಸಿರಿಯರಸ ತಿರುಮಲೆಯೊಡೆಯ!
ಕಾಮಿತಂಗಳನಿತ್ತು ಪಾಹಿ ಮಾಂ ಬಂಧೋ!
ದೇವದೇವೇಶ!ನಿನ್ನಡಿಗೆ ಬಾಗಿರಲಿ ಶಿರ
ಕಾವುದೆನ್ನನು ಸತತ ಕಾರುಣ್ಯ ಸಿಂಧೋ ॥ ೩ ॥

ಶ್ರೀ ಕೆ. ಸುಬ್ರಹ್ಮಣ್ಯ ಭಟ್ಟ.

ಎಂಬಾತನು ಈತನ ಕಾಲದಲ್ಲಿ ಅನೇಕ ಮಂದಿ ವಿದ್ಯಾರ್ಥಿಗಳು ತರ್ಕಶಾಸ್ತ್ರದಲ್ಲಿ ಪರಿಣತರಾದರು. ನಾದಿಯ ವಿಶ್ವವಿದ್ಯಾಲಯವು ನವದ್ವೀಪ, ಶಾಂತಿಪುರ, ಮತ್ತು ಗೋಪಾಲಪುರಗಳಲ್ಲಿ ತನ್ನ ಶಾಖೆಗಳನ್ನು ತೆರೆದು ವಿದ್ಯಾರ್ಥಿಗಳೊಂದಿಗೆ ವಿಚಾರ ವಿನಿಮಯ ಮಾಡಿಕೊಳ್ಳುವ ಸಂಸ್ಥೆಯಾಗಿತ್ತು.

## ಕಾಂಚೀಪುರ :

ಕಂಚಿಯು ನಾಲ್ಕನೆ, ಐದನೆ ಶತಮಾನದಲ್ಲಿ ಬೌದ್ಧ, ಜೈನ ಹಾಗೂ ವೈದಿಕ ಧರ್ಮಗಳಲ್ಲಿ ಪ್ರಮುಖವಾದ ಬೋಧನೆಯನ್ನು ನೀಡುತ್ತಿತ್ತು. ಜ್ಞಾನ ಜ್ಯೋತಿಯನ್ನು ದಿಕ್‌ದಿಗಂತಗಳಲ್ಲಿ ಹರಡಿದ ಇಂತಹ ವಿದ್ಯಾಕೇಂದ್ರಗಳು ಭಾರತದ ಕೀರ್ತಿಯನ್ನು ಉತ್ತುಂಗ ಶಿಖರಕ್ಕೇರಿಸಿದ್ದವು. ಧರ್ಮ, ಸಂಸ್ಕೃತಿಯ ತಳಹದಿಯ ಮೇಲೆ ಶಿಕ್ಷಣ ತತ್ತ್ವವನ್ನು ಬೋಧಿಸಿ ಶಾಂತಿ, ಸೌಹಾರ್ದತೆಯ ಬಾಳ್ವೆಗೆ ಮಾರ್ಗದರ್ಶನ ನೀಡಿದ್ದು ವಿದ್ಯಾಕೇಂದ್ರಗಳ ವೈಶಿಷ್ಟ್ಯವೆನಿಸಿವೆ. ಪ್ರಾಚೀನ ವಿದ್ಯಾಕೇಂದ್ರಗಳು ಪರಕೀಯರ ದಾಳಿಗೆ ತುತ್ತಾಗಿ ತಮ್ಮ ತಮ್ಮ ವೈಭವವನ್ನು ಕಳೆದು ಕೊಂಡುವು. ಕಾಂಚೀಪುರದಲ್ಲಿ ಬೌದ್ಧ ಮತೀಯರ ಅನೇಕ ವಿದ್ಯಾ ಸಂಸ್ಥೆಗಳಿದ್ದ ಕಾರಣ ಅನೇಕ ವಿದ್ವಾಂಸರು ಲೋಕವಿಖ್ಯಾತರಾದರು. ಚೀನೀ ಬೌದ್ಧ ಯಾತ್ರಿಕನಾದ ಹ್ಯೂ ಎನ್‌ತ್ಸಾಂಗನು ಅಲ್ಲಿ ಹತ್ತು ಸಾವಿರ ಬೌದ್ಧಯತಿಗಳಿದ್ದರೆಂದೂ ಮಠಗಳಲ್ಲಿ ಪಂಡಿತರ ಸಮ್ಮೇಳನ ಜರುಗುತ್ತಿತ್ತೆಂದೂ ಹೇಳಿರುತ್ತಾನೆ. ವಿಶಿಷ್ಟಾದ್ವೈತ ಮತವನ್ನು ಪ್ರಚಾರ ಮಾಡಿದ ಶ್ರೀ ರಾಮಾನುಜಾಚಾರ್ಯರಿಗೂ ಕಂಚಿಯು ಶಿಕ್ಷಣ ಕೇಂದ್ರವಾಗಿದ್ದಿತು. ಅಲ್ಲದೆ ಇನ್ನೂ ಅನೇಕ ಆಚಾರ್ಯರು ಕಂಚಿಯಲ್ಲಿ ಧರ್ಮ ಬೋಧನೆ ಮಾಡಿದರು. ಕಾಂಚೀಪುರ ಸಂಗೀತ ಕಲೆ ನೃತ್ಯ ಧರ್ಮ, ಸಂಸ್ಕೃತಿ, ಸಾಹಿತ್ಯಗಳಿಗೆ ಆಗರವಾಗಿ ತನ್ನ ಹಿರಿಮೆಯನ್ನು ಗಳಿಸಿತು.

## ಉಜ್ಜಯಿನಿ :

ಉಜ್ಜಯಿನಿಯು ಹಿಂದೂ ದಾರ್ಶನಿಕರಿಗೂ ಬೌದ್ಧ ದಾರ್ಶನಿಕರಿಗೂ ಶಿಕ್ಷಣದ ತವರು ಮನೆಯಾಗಿತ್ತು. ಇಲ್ಲಿ ಹಿಂದೂ ಗುರುಕುಲಗಳಿದ್ದವು ಮಾತ್ರವಲ್ಲದೆ ಬೌದ್ಧ ವಿಹಾರಗಳು ಇದ್ದವು. ಇಲ್ಲಿ ದರ್ಶನ, ಕಾವ್ಯ, ವ್ಯಾಕರಣ, ಛಂದಸ್ಸು, ಮೀಮಾಂಸೆ ಮುಂತಾದವು ಶಿಕ್ಷಣದ ವಿಷಯಗಳಾಗಿದ್ದವು. ವಿಕ್ರಮಾದಿತ್ಯ ಕಾಲದಲ್ಲಿ ಉಜ್ಜಯಿನಿಯು ರಾಜಧಾನಿಯಾಗಿ ಮಹಾಕವಿ ಕಾಳಿದಾಸನಿಗೂ ಆಶ್ರಯ ಸ್ಥಾನವಾಗಿದ್ದಿತು. ಕವಿಗಳಿಗೆ, ನಾಟಕಕಾರರಿಗೆ ಸ್ಫೂರ್ತಿ ನೀಡುವಷ್ಟು ಉಜ್ಜಯಿನಿ ನಗರವು ಸುಂದರವೂ, ವರ್ಣರಂಜಿತವೂ, ಮಂಗಳಕರವೂ ಆಗಿದ್ದಿತು. ಪೇಟೆ ಬೀದಿಗಳು ವರ್ಣ ರಂಜಿತವಾಗಿದ್ದು, ಅಲಂಕಾರವುಳ್ಳ ಸಭಾಭವನಗಳೂ, ಸುವರ್ಣ ಮತ್ತು ಕೆಂಪುರತ್ನಗಳ ರಾಶಿಗಳು ಕಲಾವಿದರನ್ನು ಆಕರ್ಷಿಸುತ್ತಿದ್ದವು. ಉಜ್ಜಯಿನಿಯ ಜನರು ಸತ್ಯವಂತರು, ವಿನಯಶೀಲರು, ಹಾಸ್ಯಪ್ರಿಯರು, ಭಾಷಾಪ್ರವೀಣರು, ಕಲಾಪ್ರಿಯರು ಆಗಿದ್ದರು. ಉಜ್ಜಯಿನಿಯನ್ನು ಚರಿತ್ರಕಾರರು ಪ್ರಾಚೀನ ಭಾರತದ 'ಗ್ರೀನಿಚ್' ಎಂದು ಕರೆಯುತ್ತಿದ್ದರು. ಉಜ್ಜಯಿನಿಯಲ್ಲಿ ಖಗೋಳ ಶಾಸ್ತ್ರಕ್ಕೆ ಸಂಬಂಧಿಸಿದ ಒಂದು ದೊಡ್ಡ ಪ್ರಯೋಗಶಾಲೆ ಇದ್ದು ವಿಜ್ಞಾನದ ಬೆಳವಣಿಗೆಯಲ್ಲೂ ಅಪಾರ ಯಶಸ್ಸನ್ನು ಗಳಿಸಿದ ವಿದ್ಯಾಕೇಂದ್ರವೆನಿಸಿತು.

## ವಾರಣಾಸಿ :

(ಕಾಶಿ) ವರುಣಾ ಮತ್ತು ಅಸ್ಸೀ ನದಿಯ ಸಂಗಮದಲ್ಲಿ ಈ ನಗರವು ಇರುವುದರಿಂದ ವಾರಣಾಸಿ ಎಂದು ಹೆಸರಾಯಿತೆಂದು ಚರಿತ್ರೆಯು ತಿಳಿಸುತ್ತದೆ. ಪುರಾಣಗಳಲ್ಲೂ ವಾರಣಾಸಿಯು ತನ್ನ ಹಿರಿಮೆಯನ್ನು ತೋರಿಸಿಕೊಟ್ಟ ವಿದ್ಯಾಪೀಠವೆನಿಸಿತು. ತಕ್ಷಶಿಲೆಯಂತೆಯೇ ವಾರಣಾಸಿಯೂ ಪ್ರಸಿದ್ಧ ವಿದ್ಯಾಪೀಠ. ಹರಿಶ್ಚಂದ್ರನು ಸರ್ವಸ್ವವನ್ನು ಕಳೆದುಕೊಂಡು ಕೊನೆಗೆ ಪರಮೇಶ್ವರ ಸಾಕ್ಷಾತ್ಕಾರ ಪಡೆದುದು ವಾರಣಾಸಿಯಲ್ಲಿಯೇ ಆಗಿದೆ. ತಕ್ಷಶಿಲೆಯಲ್ಲಿ ಪಾಂಡಿತ್ಯವನ್ನು ಗಳಿಸಿದ ವಿದ್ವಾಂಸರು ವಾರಣಾಸಿಯಲ್ಲಿ ವಿದ್ಯಾಗುರುಗಳಾಗಿ ಸೇರುತ್ತಿದ್ದರು. ಹ್ಯೂಯೆನ್‌ತ್ಸಾಂಗನ ಹೇಳಿಕೆಯಂತೆ ವಾರಣಾಸಿಯಲ್ಲಿ ಮೂರು ಸಾವಿರ ವಿದ್ಯಾರ್ಥಿಗಳನ್ನೊಳಗೊಂಡ ಬೌದ್ಧ ಮಠಗಳಿತ್ತೆಂದು ತಿಳಿದು ಬರುತ್ತದೆ. ವಾರಣಾಸಿಯು ಭಗವಾನ್ ಬುದ್ಧನಿಗೆ ಆಶ್ರಯ ಕೊಟ್ಟ ಜಾಗವೂ ಆಗಿದೆ. ಇಲ್ಲಿಯ ಸಮೀಪದ ಸಾರಾನಾಥದಲ್ಲಿಯೇ ಆತನು ತನ್ನ ಸಂದೇಶವನ್ನು ಜಗತ್ತಿಗೆ ಸಾರಿದನು. ಸಾರಾನಾಥದ ಸುತ್ತಮುತ್ತ ಅನೇಕ ಸ್ತೂಪಗಳೂ ವಿಹಾರಗಳೂ ಇವೆ. ಮಹಾ ಬೋಧಿ ಸಂಘದವರು ತಕ್ಷಶಿಲೆಯಲ್ಲಿ ದೊರೆತ ಬುದ್ಧನ ಪ್ರತಿಮೆಗಳನ್ನು ವಾರಣಾಸಿಯ "ಮೂಲಗಂಧಕುಟಿ" ವಿಹಾರದಲ್ಲಿ ರಕ್ಷಣೆ ಮಾಡಿದ್ದಾರೆ. ಬುದ್ಧನ ನಂತರ ನಾಶವಾಗುತ್ತಿದ್ದ ಹಿಂದೂಧರ್ಮವನ್ನು ಉದ್ಧರಿಸಲು ಶ್ರೀ ಶಂಕರಾಚಾರ್ಯರು ಆರಂಭಿಸಿದ್ದು ವಾರಣಾಸಿಯಲ್ಲಿಯೇ ಆಗಿದೆ. ವಾರಣಾಸಿಯು ಒಂದು ಆರ್ಷೇಯ ಸಂಸ್ಕೃತಿಯ ಕೇಂದ್ರವಾಗಿದ್ದು ಭಾರತದ ಜ್ಞಾನ ಜ್ಯೋತಿಯನ್ನು ವಿಶ್ವದಾದ್ಯಂತ ಬೆಳಗಿಸುತ್ತಿದೆ.

## ತಾಳಗುಂದ :

ಹಿಂದೆ ಚರಿತ್ರೆಯಲ್ಲಿ ತಾಳಗುಂದಕ್ಕೆ ಸ್ಥಾನಕುಂದೂರು ಎಂಬ ಹೆಸರೂ ಇತ್ತು. ಶಾತವಾಹನರ ಕಾಲದಿಂದಲೂ ಈ ವಿದ್ಯಾಲಯವು ಪ್ರಸಿದ್ಧಿ ಪಡೆದಿತ್ತು. ಇಲ್ಲಿ ಸಂಸ್ಕೃತ ಭಾಷೆಯಲ್ಲಿ ಶಿಕ್ಷಣ ನೀಡುತ್ತಿದ್ದರು. ಸಾವಿರ ವರ್ಷಕ್ಕೂ ಹಿಂದಿನ ವಿದ್ಯಾಪೀಠವೆನಿಸಿದ್ದ ಇದು ಹನ್ನೆರಡನೆ ಶತಮಾನದ ಹೊತ್ತಿಗೆ ಮೂವತ್ತೆರಡು ಸಾವಿರಕ್ಕೆಂತಲೂ ಹೆಚ್ಚು ಬ್ರಾಹ್ಮಣರನ್ನು ವಿದ್ಯಾವಂತರನ್ನಾಗಿ ಮಾಡುವಲ್ಲಿ ಸಫಲತೆಯನ್ನು ಕಂಡಿತು. ಅಗ್ರಹಾರಗಳಲ್ಲಿ ಉತ್ಕೃಷ್ಟ ಹಾಗೂ ಪ್ರಮುಖ ಅಗ್ರಹಾರಗಳೆಂದು ಹೆಸರು ಪಡೆಯಿತು. ವೈದಿಕ ವಾಙ್ಮಯ, ಸಂಸ್ಕೃತ, ಕನ್ನಡಸಾಹಿತ್ಯಗಳ ಅಧ್ಯಯನಕ್ಕೆ ವಿಶಿಷ್ಟ ಸೌಲಭ್ಯಗಳನ್ನು ಒದಗಿಸಿದ್ದವು. ಇವುಗಳಲ್ಲದೆ ಗುರುಕುಲಗಳು, ಅಗ್ರಹಾರಗಳು, ಬ್ರಹ್ಮಪುರಿಗಳು, ಮಠಮಂದಿರಗಳಲ್ಲೂ ವಿದ್ಯಾಭ್ಯಾಸಗಳು ನಡೆಯುತ್ತಿತ್ತು. ಇಂತಹ ಶಿಕ್ಷಣಕೇಂದ್ರಗಳಿಗೆ ರಾಜರು, ಸಮಾಜದ ಗಣ್ಯರು ದಾನದತ್ತಿಗಳನ್ನು ನೀಡುತ್ತಿದ್ದರು.

## ಅಗ್ರಹಾರಗಳು :

ಅಗ್ರಹಾರಗಳಲ್ಲಿ ವೇದಗಳ ಹಾಗೂ ವೈದಿಕ ಸಂಪ್ರದಾಯದಂತೆ ಶಿಕ್ಷಣ ನಡೆಯುತ್ತಿತ್ತು. ಬ್ರಾಹ್ಮಣರು ಮಾತ್ರ ವೈದಿಕ ಧರ್ಮಶಾಸ್ತ್ರಗಳನ್ನು ಕಲಿತು ಷಟ್‌ಕರ್ಮಗಳಲ್ಲಿ ನಿರತರಾಗಿರುತ್ತಿದ್ದರು. ವೈದಿಕ ವಿದ್ವಾಂಸರನ್ನು ದೇವಾಲಯಗಳಲ್ಲಿ ಅರ್ಚನೆಗಾಗಿ ನೇಮಿಸಲಾಗುತ್ತಿತ್ತು. ವಿದ್ವಾಂಸರಾದ ಬ್ರಾಹ್ಮಣರಿಗೆ ಇಡೀ ಗ್ರಾಮವನ್ನು ದಾನ, ದತ್ತಿ ರೂಪದಲ್ಲಿ ಬಿಟ್ಟುಕೊಡುತ್ತಿದ್ದರು. ಅವರು ಅಲ್ಲಿ ವೈದಿಕಕಾರ್ಯವನ್ನೂ ನಡೆಸಿಕೊಂಡು ಶಿಷ್ಯರಿಗೆ ಶಿಕ್ಷಣವನ್ನು ನೀಡುತ್ತಿದ್ದರು. ಇಂತಹ ಸಮೂಹಗಳಿಗೆ ಅಗ್ರಹಾರಗಳೆನ್ನುತ್ತಿದ್ದರು. ಇಂತಹ ವೈದಿಕ ವಿದ್ವಾಂಸರ ಸಾಲುಮನೆಗಳೇ ಅಗ್ರಹಾರಗಳೆಂದು ಪ್ರಸಿದ್ಧಿ ಪಡೆದಿವೆ. ಕದಂಬ ಮಯೂರ ಶರ್ಮನು ತಾಳಗುಂದದಲ್ಲಿ ನಿರ್ಮಿಸಿದ ಅಗ್ರಹಾರಗಳಲ್ಲಿ ಮೂವತ್ತೆರಡು ಸಾವಿರ ಬ್ರಾಹ್ಮಣ ವಿದ್ವಾಂಸರಿದ್ದರೆಂದೂ, 144 ಗ್ರಾಮಗಳನ್ನು ದಾನ ದತ್ತಿ ರೂಪದಲ್ಲಿ ಅಗ್ರಹಾರಕ್ಕಾಗಿ ನೀಡಿದ್ದನೆಂದೂ, ತಿಳಿದು ಬರುತ್ತದೆ. ತಾಳಗುಂದ ಅಗ್ರಹಾರವೇ ವಿದ್ಯಾಕೇಂದ್ರಗಳ ಮೊದಲನೆ ಅಗ್ರಹಾರವಾಗಿತ್ತೆಂದು ಹೆಸರು ಪಡೆದಿದೆ. ಧರ್ಮಜ್ಞರೆನಿಸಿ ಅಧ್ಯಯನ, ಅಧ್ಯಾಪನದಲ್ಲಿ ನಿರತರಾಗಿರುತ್ತಿದ್ದ ವಿದ್ವಾಂಸರ ಸಮೂಹವನ್ನು ಮಹಾಜನರೆಂದೂ ಕರೆಯುತ್ತಿದ್ದರು. ಶಾಸನಗಳಲ್ಲಿ ಮಹಾಗ್ರಾರ

ಗಳಿಂದಲೂ ಉಲ್ಲೇಖವಿದೆ. 7ನೇ ಶತಮಾನದಲ್ಲಿ ಚಾಲುಕ್ಯರ ರಾಜಧಾನಿಯಾಗಿದ್ದ ಬಾದಾಮಿಯಲ್ಲಿ ಹದಿನಾಲ್ಕು ವಿದ್ಯೆಗಳಲ್ಲೂ ಪರಿಣಿತರಾದ ಒಂದು ಸಾವಿರ ಮಹಾಜನರಿದ್ದರಂತೆ. ಐಹೊಳೆ, ನೀರಗುಂದ, ಬೇಗೂರುಗಳಲ್ಲೂ ಮಹಾಜನರಿದ್ದು ಹೆಸರಾಂತ ಅಗ್ರಹಾರಗಳೆನಿಸಿವೆ. ಇಲ್ಲಿ ವ್ಯಾಕರಣ ಛಂದಸ್ಸು, ಆಗಮ, ಸ್ಮೃತಿ, ಪುರಾಣಗಳಲ್ಲಿ ಪಂಡಿತ್ಯರಾದವರು ಚರ್ಚಾಗೋಷ್ಠಿಯಲ್ಲಿ ಭಾಗ ವಹಿಸುತ್ತಿದ್ದರು. ರಾಯಚೂರು ಜಿಲ್ಲೆಯ ಕುಕ್ಕನೂರು, ಕಲ್ಬುರ್ಗಿಜಿಲ್ಲೆಯ ನಾಗಾಯಿ ಬಿಜಾಪುರದ ಸಾಲೋಟಗಿ ಮೊದಲಾದುವು ಮಹಾಗ್ರಾರಗಳಲ್ಲಿ ಪ್ರಸಿದ್ಧಿ ಹೊಂದಿದವುಗಳಾಗಿವೆ. ಕೊಪ್ಪಳ ಪ್ರಖ್ಯಾತ ವಿಧ್ಯಾನಗರಗಳಲ್ಲಿ ಒಂದಾಗಿತ್ತು. ನೃಪತುಂಗನು ಇದನ್ನು ಕವಿರಾಜಮಾರ್ಗದಲ್ಲಿ "ವಿಧಿತ ಮಹಾಕೊಪಣ ನಗರ"ವೆಂದು ಹೊಗಳಿದ್ದಾನೆ.

## ಬ್ರಹ್ಮಪುರಿಗಳು :

ಬ್ರಹ್ಮಪುರಿಗಳು ಅಗ್ರಹಾರಗಳಂತೆಯೇ ಶಿಕ್ಷಣವನ್ನು ನೀಡುವ ಸಂಸ್ಥೆಗಳಾಗಿದ್ದವು. ಇವುಗಳಲ್ಲಿ ಅಗ್ರಹಾರಗಳು ಗ್ರಾಮಗಳನ್ನು ದಾನ, ದತ್ತಿಗಳಾಗಿ ಪಡೆದು ಗ್ರಾಮಾಂತರ ಪ್ರದೇಶದಲ್ಲಿದ್ದರೆ ಬ್ರಹ್ಮಪುರಿಗಳು ಪಟ್ಟಣಗಳಲ್ಲಿದ್ದವು. ಹೊಯ್ಸಳರ ಹಾಗೂ ವಿಜಯನಗರ ಅರಸರಕಾಲದಲ್ಲಿ ಇಂತಹ ಬ್ರಹ್ಮಪುರಿ ವಿದ್ಯಾಕೇಂದ್ರಗಳು ಇದ್ದಂತೆ ಕಂಡುಬರುತ್ತವೆ. ತಲಕಾಡು, ಮಾನ್ಯಪುರ, ಬಳ್ಳಿಗಾವೆ, ಇಂಗಳೇಶ್ವರ, ಕೊಲ್ಲಾಪುರ, ಶೃಂಗೇರಿ, ಪುಲಿಗೆರೆ ವಿಕ್ರಮಪುರ-ಮೊದಲಾದುವು ಪ್ರಮುಖ ಬ್ರಹ್ಮಪುರಿಗಳಾಗಿದ್ದವು.

## ಘಟಿಕಾಸ್ಥಾನ :

ಅಗ್ರಹಾರ, ಬ್ರಹ್ಮಪುರಿಗಳಲ್ಲಿ ವಿದ್ಯಾಭ್ಯಾಸ ಮುಗಿಸಿ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಘಟಿಕಾಸ್ಥಾನಗಳಲ್ಲಿ ಶಿಕ್ಷಣಾರ್ಥಿಗಳು ಸೇರುತ್ತಿದ್ದರು. ಶಿಕ್ಷಣಾರ್ಥಿಗಳಿಗೆ ಶ್ರೇಷ್ಠ ವಿದ್ವಾಂಸರ ಮಾರ್ಗದರ್ಶನ ಸಿಗುತ್ತಿತ್ತು. ದಕ್ಷಿಣ ಭಾರತದಲ್ಲಿ ಇಂತಹ ಘಟಿಕಾಸ್ಥಾನಗಳು 64 ಇದ್ದವೆಂದು ತಿಳಿದು ಬರುತ್ತದೆ. ಕಂಚಿಯು ಒಂದು ಮಹಾಘಟಿಕ ಕೇಂದ್ರವಾಗಿದ್ದು, ಮಯೂರವರ್ಮ ಮೊದಲಾದವರು ಇಲ್ಲಿ ವ್ಯಾಸಂಗ ಮಾಡಿದ್ದರು. ಘಟಿಕಾಸ್ಥಾನಗಳಲ್ಲಿ ವಿದ್ಯಾಭ್ಯಾಸಕ್ಕೆ ಅರ್ಹತೆ ಪಡೆದವನು ವಿದ್ವತ್ತಿನ ಶಿಖರವನ್ನು ಮುಟ್ಟಿದವನಾಗಿರುತ್ತಿದ್ದನು. ಇಂತಹವನು ಘಟಿಕಾಸಾಹಸಿ ಎಂದು ವಿದ್ವಾಂಸರಿಂದ ಹೊಗಳಲ್ಪಡುತ್ತಿದ್ದನು. ಕಾಡಿಯೂರು, ನಾಗಾಯಿ, ಹೂವಿನ ಬಾಗೆ, ಬಳ್ಳಿಗಾವೆ, ತಾಳಗುಂದ, ಧಾರವಾಡ, ರಾಯಬಾಗ್, ಕಡಲೆವಾಡ-ಹೊಟ್ಟೂರು,ಮೊದಲಾದುವು ಮುಖ್ಯವಾದ ಘಟಿಕಾಸ್ಥಾನಗಳಾಗಿದ್ದವು. ಘಟಿಕಾಸ್ಥಾನಗಳ ಪದವೀಧರನನ್ನು "ಸ್ನಾತಕ" ನೆಂದು ಕರೆಯುತ್ತಿದ್ದರು.

## ಮಠ ಮಂದಿರಗಳು :

ಮಠ ಮಂದಿರಗಳು ಧಾರ್ಮಿಕ ಚಟುವಟಿಕೆಗಳ ತವರುಮನೆ ಎನಿಸಿವೆ. ಶೈವಾಚಾರ್ಯರು, ತಪೋವೃದ್ಧಿ ಮಾಡುವುದರ ಜೊತೆಗೆ ಶಿಕ್ಷಣದ ಹೊರೆಯನ್ನು ಹೊರುತ್ತಿದ್ದರು. ಮಠಗಳಲ್ಲಿ ಅತ್ಯಂತ ಪ್ರಸಿದ್ಧಿ ಪಡೆದ ಮಠ ಬಳ್ಳಿಗಾವೆಯ ಕೋಡಿಯ ಮಠವಾಗಿತ್ತು. ಶೈವ ಗುರುಗಳಲ್ಲಿ ಲಕುಲೀಶರು ಮತ್ತು ಕಾಳಾಮುಖರು ಮುಖ್ಯರಾಗಿದ್ದರು. ಇವರಿಗೆ ಶಿವಮಂದಿರವೇ ಮಠವೂ ಶಾಲೆಯೂ ಆಗಿದ್ದಿತು. ಬಳ್ಳಿಗಾವಿಯ ಕೋಡಿಮಠ ಪಂಚಮಠಗಳೂ ಹೆಬ್ಬಾಳುವಿನ ಭುಜಬ್ಬೇಶ ದೇವಾಲಯಗಳಲ್ಲಿ ಪ್ರಾಥಮಿಕ ವಿದ್ಯಾಭ್ಯಾಸಗಳನ್ನು ನಡೆಸಲ್ಪಡುತ್ತಿತ್ತು. ತಾಳಗುಂದದ ಪ್ರಣವೇಶ್ವರ ದೇವಾಲಯ, ಹರಿಹರೇಶ್ವರ ದೇವಾಲಯ ಮೊದಲಾದುವುಗಳೂ ಪ್ರಾಥಮಿಕ ವಿದ್ಯಾಕೇಂದ್ರಗಳಾಗಿದ್ದವು. ಇಂತಹ ಮಠ ಮಂದಿರಗಳಲ್ಲಿ ಶಿಕ್ಷಣಾರ್ಥಿಗಳಾದವರು ಬ್ರಹ್ಮಚರ್ಯದಿಂದ ಇದ್ದರಲ್ಲದೆ ಗುರುವೃಂದದವರೂ ಬ್ರಹ್ಮಚಾರಿಗಳಾಗಿದ್ದರು. ಹನ್ನೆರಡನೇ ಶತಮಾನದ ಬಸವಕಲ್ಯಾಣದ ಅನುಭವ ಮಂಟಪವು ವಿಶ್ವವಿದ್ಯಾನಿಲಯದಂತೆ ಜ್ಞಾನಕೇಂದ್ರವಾಗಿದ್ದಿತು. ದೇವಾಲಯಗಳು ಶಿಕ್ಷಣಕ್ಕೆ ಮಾತ್ರ ಮಿಸಲಾಗಿರದೆ ಉತ್ಸವ, ಹರಿಕಥಾ ಕಾಲಕ್ಷೇಪ, ಭಜನೆ, ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದವು. ಪ್ರಾಚೀನಕಾಲದಿಂದಲೂ ಬೆಳೆದುಕೊಂಡು ಬಂದಿರುವ ಮಠ ಮಂದಿರಗಳು ಜಾತೀಯತೆಯ ಬೇಧಭಾವ ತೊರೆದು ಧರ್ಮ, ಜ್ಞಾನ, ಭಕ್ತಿ, ವಿದ್ಯೆ ಮುಂತಾದುವುಗಳನು ಉನ್ನತ ಮಟ್ಟದಲ್ಲಿ ಪ್ರಚುರಿಸಿ ಸಂಸ್ಕೃತಿಯನ್ನು ನೈತಿಕತೆಯನ್ನು ಎತ್ತಿಹಿಡಿದ ದಾರಿದೀಪಗಳಾಗಿವೆ.



# ಶ್ರೀಗುರುಜಗನ್ನಾಥದಾಸರು

## ರಚಿಸಿದ ಶ್ರೀ ವೆಂಕಟೇಶಸ್ತುತಿ

ಶ್ರೀರಮಣ ಸರ್ವೇಶ ಸರ್ವಗ
ಸಾರಭೋಕ್ತ ಸ್ವತಂತ್ರ ಸರ್ವದ
ಪಾರಮಹಿಮೋದಾರಸದ್ಗುಣಪೂರ್ಣಗಂಭೀರ
ಸಾರಿದವರಘ ದೂರಗೈಸೀ
ಸೂರಿಜನರಿಗೆ ಸೌಖ್ಯನೀಡುವ
ಧೀರವೆಂಕಟರಮಣ ಕರುಣದಿ ಪೊರೆಯೊ ನೀ ಎನ್ನ ॥ ೧ ॥

ಘನ್ನಮಹಿಮಾಪನ್ನಪಾಲಕ
ನಿನ್ನ ಹೊರತಿನ್ನನ್ಯದೇವರ
ಮನ್ನದಲಿ ನಾ ನೆನಿಸೆನೆಂದಿಗು ಬನ್ನಬಡಿಸಿದರು
ಎನ್ನ ಪಾಲಕ ನೀನೆ ಇರುತಿರೆ
ಇನ್ನು ಭವಭಯವೇಕೆ ಎನಗೆ
ಚೆನ್ನವೆಂಕಟರಮಣ ಕರುಣದಿ ಪೊರೆಯೊ ನೀ ಎನ್ನ ॥ ೨ ॥

ಲಕುಮಿ ಬೊಮ್ಮ ಭವಾಮರೇಶರು
ಭಕುತಿಪೂರ್ವಕ ನಿನ್ನ ಭಜಿಸೀ
ಸಕಲಲೋಕಕೆ ನಾಥರೆನಿಪರೊ ಸರ್ವಕಾಲದಲಿ
ನಿಖಿಳಜೀವರ ಪೊರೆವೊ ದೇವನೆ
ಭಕುತಿ ನೀಯೆನಗೀಯದಿರಲು
ವ್ಯಕುತವಾಗ್ಯಪಕೀರ್ತಿ ಬಪ್ಪುದೊ ಶ್ರೀನಿಕೇತನನೆ ॥ ೩ ॥

ಯಾಕೆ ಪುಟ್ಟದೊ ಕರುಣ ಎನ್ನೊಳು
ಸಾಕಲಾರೆಯ ನಿನ್ನ ಶರಣನ
ನೂಕಿಬಿಟ್ಟರೆ ನಿನಗೆ ಲೋಕದಿ ಖ್ಯಾತಿ ಬಪ್ಪುವುದೇ ।
ನೋಕನೀಯನೆ ನೀನೆ ಎನ್ನನು
ಜೋಕೆಯಿಂದಲಿ ಕಾಯೊ ಬಿಡದೆ
ಏಕದೇವನು ನೀನೆ ವೆಂಕಟ ಶೇಷಗಿರಿವಾಸ ॥ ೪ ॥

ಅಂಬುಜಾಂಬಕ ನಿನ್ನ ಪದಯುಗ
ನಂಬಿಕೊಂಡೀ ಪರಿಯಲಿರುತಿರೆ
ಡೊಂಬೆಗಾರನ ತೆರದಿ ನೀ ನಿರ್ಭಾಗ್ಯ ಸ್ಥಿತಿತೋರೆ
ಬಿಂಬಮೂರುತಿ ನಿನ್ನ ಕರಗತ
ಕಂಬುವರವೇ ಗತಿಯೊ ವಿಶ್ವ
ಕುಟುಂಬಿ ಎನ್ನನು ಸಲಹೊ ಸಂತತ ಶೇಷಗಿರಿವಾಸ ॥ ೫ ॥

ಸಾರಶಿರಿವೈಕುಂಠ ತ್ಯಜಿಸೀ
ಧಾರುಣೀಯೊಳು ಗೊಲ್ಲನಾಗೀ
ಚೋರಕರ್ಮವ ಮಾಡಿ ಬದುಕಿಹದಾರಿಗರಿಕಿಲ್ಲ
ಸಾರಿಪೇಳುವೆ ನಿನ್ನ ಗುಣಗಳ
ಪಾರವಾಗಿರುತಿಹವೊ ಜನರಿಗೆ
ಧೀರ ವೆಂಕಟರಮಣ ಕರುಣದಿ ಪೊರೆಯೊ ನೀ ಎನ್ನ ॥ ೬ ॥

ನೀರ ಮುಳುಗೀ ಭಾರಪೊತ್ತೂ
ಧಾರುಣೀತಳವಗೆದು ಸಿಟ್ಟಲಿ
ಕ್ರೂರನುದರವ ಸೀಳಿ ಕರುಳಿನ ಮಾಲೆ ಧರಿಸಿದರು
ಪೋರ ವಿಪ್ರ ಕುಠಾರಿ ವನವನ
ಚಾರಿ ಗೋಪ ದಿಗಂಬರಾಶ್ವವ
ಏರಿ ಪೋದರು ಬಿಡೆನೊ ವೆಂಕಟಶೇಷಗಿರಿವಾಸ ॥ ೭ ॥

ಲಕ್ಷ್ಮಿನಾಯಕ ಸಾರ್ವಭೌಮನೆ
ಪಕ್ಷಿವಾಹನ ಪರಮಪುರುಷನೆ
ಮೋಕ್ಷದಾಯಕ ಪ್ರಾಣಜನಕನೆ ವಿಶ್ವವ್ಯಾಪಕನೆ ।
ಅಕ್ಷಯಾಂಬರವಿತ್ತಿ ವಿಜಯನ
ಪಕ್ಷಪಾತವ ಮಾಡಿ ಕುರುಗಳ
ಲಕ್ಷ್ಯಮಾಡದೆ ಕೊಂದೆಯೋ ಶ್ರೀಶೇಷಗಿರಿವಾಸ ॥ ೮ ॥



ಹಿಂದೆ ನೀ ಪ್ರಹ್ಲಾದ ಗೋಸುಗ
ಎಂದು ನೋಡದ ರೂಪಧರಿಸೀ
ಬಂದು ದೈತ್ಯನ ಒಡಲ ಬಗೆದೂ ಪೊರೆದೆ ಬಾಲಕನ
ತಂದೆತಾಯ್ಗಳ ಬಿಟ್ಟು ವಿಪಿನದಿ
ನಿಂದು ತಪಿಸುವ ಪಂಚವತ್ಸರ
ಕಂದನಾ ಧ್ರುವಗೊಲಿದು ಪೊರೆದೆಯೊ ಶೇಷಗಿರಿವಾಸ ॥ ೯ ॥

ಮಡುವಿನೊಳಗಿಹ ಮಕರಿಕಾಲನು
ಪಿಡಿದು ಬಾಧಿಸೆ ಕರಿಯು ತ್ರಿಜಗ
ದ್ವೊಡೆಯ ಪಾಲಿಸೊ ಎನಲು ತಕ್ಷಣ ಬಂದು ಪಾಲಿಸಿದೆ
ಮಡದಿಮಾತನು ಕೇಳಿ ಬಲುಪರಿ
ಬಡವಬ್ರಾಹ್ಮಣ ಧಾನ್ಯಕೊಡಲು
ಪೊಡವಿಗಸದಳ ಭಾಗ್ಯನೀಡಿದೆ ಶೇಷಗಿರಿವಾಸ ॥ ೧೦ ॥

ಪಿಂತೆ ಮಾಡಿದ ಮಹಿಮೆಗಳ ನಾ
ನೆಂತು ವರ್ಣಿಸಲೇನುಫಲ ಶ್ರೀ
ಕಾಂತ ಎನ್ನನು ಪೊರೆಯೆ ಕೀರುತಿ ನಿನಗೆ ಫಲವೆನಗೆ
ಕಂತುಜನಕನೆ ಎನ್ನ ಮನಸಿನ
ಅಂತರಂಗದಿ ನೀನ ಸರ್ವದ
ನಿಂತು ಪ್ರೇರಣೆ ಮಾಳ್ಪೆ ಸರ್ವದ ಶೇಷಗಿರಿವಾಸ ॥ ೧೧ ॥

ಶ್ರೀನಿವಾಸನೆ ಭಕ್ತಪೋಷನೆ
ಜ್ಞಾನಿಕುಲಗಳಿಗಭಯದಾಯಕ
ದೀನಬಾಂಧವ ನೀನೆ ಎನಮನದರ್ಥ ಪೂರೈಸೊ
ಅನುಪಮೋಪಮಜ್ಞಾನಸಂಪದ
ವಿನಯಪೂರ್ವಕವಿತ್ತು ಪಾಲಿಸೊ
ಜನುಮ ಜನುಮಕೆ ಮರೆಯ ಬೇಡವೋ ಶೇಷಗಿರಿವಾಸ ॥೧೨॥

ಮದವು ಮತ್ಸರ ಲೋಭಮೋಹವು
ಒದಗಬಾರದು ಎನ್ನ ಮನದಲಿ
ಪದುಮನಾಭನೆ ಜ್ಞಾನಭಕ್ತಿ ವಿರಕ್ತಿ ನೀನಿತ್ತು
ಹೃದಯ ಮಧ್ಯದಿ ನಿನ್ನರೂಪವು
ವದನದಲಿ ತವ ನಾಮಮಂತ್ರವು
ಸದಯ ಪಾಲಿಸು ಬೇಡಿಕೊಂಬೆನೊ ಶೇಷಗಿರಿವಾಸ ॥ ೧೩ ॥

ಅಂದನುಡಿ ಹುಸಿಯಾಗಬಾರದು
ಬಂದ ಭಾಗ್ಯವು ಪೋಗಬಾರದು
ಕುಂದು ಬಾರದೆ ನಿನ್ನ ಕರುಣವು ದಿನದಿ ವರ್ಧಿಸಲಿ
ನಿಂದೆ ಮಾಡುವ ಜನರ ಸಂಗವು
ಎಂದಿಗಾದರು ದೊರೆಯ ಬಾರದು
ಎಂದು ನಿನ್ನನು ಬೇಡಿಕೊಂಬೆನೊ ಶೇಷಗಿರಿವಾಸ ॥ ೧೪ ॥

ಏನ ಬೇಡಲಿ ಎನ್ನ ದೇವನೆ
ಸಾನುರಾಗದಿ ಎನ್ನ ಪಾಲಿಸೊ
ನಾನಾವಿಧವಿಧ ಸೌಖ್ಯ ನೀಡುವುದಿಹಪರಂಗಳಲಿ ।
ಶ್ರೀನಿವಾಸನೆ ನಿನ್ನ ದಾಸಗೆ
ಏನುಕೊರತಿಲ್ಲೆಲ್ಲಿ ನೋಡಲು
ನೀನೆ ನಿಂತೀ ವಿಧದಿ ಪೋಷಿಸು ಶೇಷಗಿರಿವಾಸ ॥ ೧೫ ॥

ಅರುಮುನಿದವರೇನು ಮಾಳ್ಪರೊ
ಆರುವೊಲಿದವರೇನು ಮಾಳ್ಪರೊ
ಆರು ನೇಹಿಗರಾರು ದ್ವೇಷಿಗಳಾರುದಾಶಿನರು
ಕ್ರೂರ ಜೀವರ ಹಣಿದು ಸಾತ್ತ್ವಿಕ
ಧೀರ ಜೀವರ ಪೊರೆದು ನಿನ್ನಲಿ
ಸಾರ ಭಕುತಿಯನಿತ್ತು ಪಾಲಿಸೊ ಶೇಷಗಿರಿವಾಸ ॥ ೧೬ ॥

ನಿನ್ನ ಸೇವೆಯನಿತ್ತು ಎನಗೇ
ನಿನ್ನ ಪದಯುಗ ಭಕ್ತಿನೀಡೀ
ನಿನ್ನ ಗುಣ ಗಣ ಸ್ತವನ ಮಾಡುವ ಜ್ಞಾನ ನೀನಿತ್ತು
ಎನ್ನ ಮನದಲಿ ನೀನೆ ನಿಂತೂ
ಘನ್ನಕಾರ್ಯವ ಮಾಡಿ ಮಾಡಿಸು
ಧನ್ಯನೆಂದೆನಿಸೆನ್ನ ಲೋಕದಿ ಶೇಷಗಿರಿವಾಸ ॥ ೧೭ ॥

ಜಯ ಜಯತು ಶಠ ಕೂರ್ಮರೂಪನೆ
ಜಯ ಜಯತು ಕಿಟಿ ಸಿಂಹ ವಾಮನ
ಜಯ ಜಯತು ಭೃಗುರಾಮ ರಘುಕುಲಸೋಮ ಶ್ರೀರಾಮ
ಜಯ ಜಯತು ಶಿರಿ ಯದುವರೇಣ್ಯನೆ
ಜಯ ಜಯತು ಜನಮೋಹ ಬುದ್ಧನೆ
ಜಯ ಜಯತು ಕಲಿಕಲ್ಮಷಘ್ನನೆ ಕಲ್ಕಿನಾಮಕನೆ ॥ ೧೮ ॥

ಕರುಣಸಾಗರ ನೀನೆ ನಿಜಪದ
ಶರಣವತ್ಸಲ ನೀನೆ ಶಾಶ್ವತ
ಶರಣಜನಮಂದಾರ ಕಮಲಾಕಾಂತ ಜಯವಂತ
ನಿರುತ ನಿನ್ನನು ನುತಿಸಿ ಪಾಡುವೆ
ವರದ ಗುರುಜಗನಾಥವಿಠ್ಠಲ
ಪರಮ ಪ್ರೇಮದಿ ಪೊರೆಯೊ ಎನ್ನನು ಶೇಷಗಿರಿವಾಸ ॥ ೧೯ ॥

(ತಿ. ತಿ. ದೇವಸ್ಥಾನಗಳ ದಾಸಸಾಹಿತ್ಯ ಪ್ರಾಜೆಕ್ಟ್ ಪ್ರಕಟಿಸಲಿರುವ "ಶ್ರೀ ಗುರುಜಗನ್ನಾಥದಾಸರ ಕೃತಿಗಳು" ಪುಸ್ತಕದಿಂದ ಶ್ರೀಗುರು ಜಗನ್ನಾಥದಾಸರ ಆರಾಧನೆಯ ಸಂದರ್ಭದಲ್ಲಿ ನೀಡಲಾಗಿದೆ).



# ಆದರ್ಶ ಗುರುಶಿಷ್ಯರು

## ಉಪಮನ್ಯು-ಧೌಮ್ಯಮಹರ್ಷಿ

ಭಾರತದ ಆದಿಪರ್ವದಲ್ಲಿ ಇವರ ಚರಿತ್ರೆ ಕಾಣಬಹುದು- ಉಪಮನ್ಯು ವಿದ್ಯಾಕಾಂಕ್ಷಿಯಾಗಿ ಅಪೋದನೆಂಬ ಧೌಮ್ಯ ಮಹರ್ಷಿಗಳ ಆಶ್ರಮದಲ್ಲಿ ಸೇವೆಮಾಡುತ್ತಿದ್ದ. ಮಹರ್ಷಿಗಳು ಅವನನ್ನು ಪ್ರಥಮತಃ ಆಶ್ರಮದ ಆಕಳನ್ನು ಕಾಯಲು ನಿಯಮಿಸಿದರು. ಆಶ್ರಮದಲ್ಲಿ ಅವನಿಗೆ ಆಹಾರ ಒದಗಿಸದಿದ್ದಾಗ್ಯೂ ಉಪಮನ್ಯು ದಿನೇದಿನೇ ದಷ್ಟಪುಷ್ಟನಾಗಿ ಬೆಳೆಯುತ್ತಿದ್ದುದನ್ನು ಕಂಡು ಅವನನ್ನು ವಿಚಾರಿಸಲಾಗಿ, ಅವನು ಆಕಳಹಾಲಿನಿಂದ ಬೆಳೆಯುತ್ತಿರುವುದಾಗಿ ಹೇಳಿದ. ಮಹರ್ಷಿಗಳು ಹಾಲು ಕುಡಿಯಬಾರದೆಂದು ಹೇಳಿದಮೇಲೂ ಅವನು ಅದೇ ರೀತಿ ಬೆಳೆಯುತ್ತಿದ್ದುದನ್ನು ಕಂಡು 'ಈಗೇನು ಆಹಾರ ಸೇವಿಸುತ್ತಿರುವೆ' ಎಂದು ಕೇಳಿದಾಗ 'ಹಾಲು ಕುಡಿದ ಕರುಗಳ ಬಾಯಲ್ಲಿರುವ ನೊರೆಯಿಂದ ಜೀವಿಸುತ್ತಿರುವೆ'ನೆಂದಾಗ, ಅದನ್ನೂ ಇನ್ನು ಮೇಲೆ ಸೇವಿಸಕೂಡದೆಂದು ಕಠಿಣವಾಗಿ ಆಜ್ಞೆ ಮಾಡಿದರು. ಅದರಂತೆಯೇ ಇದ್ದು ಒಂದುದಿನ ಬಹಳ ಹಸಿವಾದಾಗ ಪಕ್ಕದಲ್ಲಿ ಹೇರಳವಾಗಿ ಬೆಳೆದಿದ್ದ ಎಕ್ಕದ ಎಲೆಗಳನ್ನು ತಿಂದು ಕಣ್ಣು ಕಾಣದೆ, ಆಶ್ರಮಕ್ಕೆ ಹಿಂದಿರುಗುವಾಗ ದಾರಿಯಲ್ಲಿ ಹಾಳುಬಾವಿಯಲ್ಲಿ ಬಿದ್ದುಬಿಟ್ಟ. ಎಷ್ಟು ಹೊತ್ತಾದರೂ ಬರದೇ ಇದ್ದ ಉಪಮನ್ಯುವನ್ನು ಹುಡುಕಿಕೊಂಡು ಧೌಮ್ಯ ಮಹರ್ಷಿಗಳು ಬರುತ್ತಿದ್ದಾಗ ಬಾವಿಯಲ್ಲಿ ಬಿದ್ದಿದ್ದ ಇವನಿಗೆ ಆಶ್ವಿನೀದೇವತೆಗಳ ಸ್ತೋತ್ರದಿಂದ ಕಣ್ಣು ಪಡೆಯುವಂತೆ ಹೇಳಲು ಹಾಗೆಯೇ ಪ್ರಾರ್ಥಿಸಿ ಪುನಃ ದೃಷ್ಟಿ ಪಡೆದುಕೊಂಡ. ಆಮೇಲೆ ಮಹರ್ಷಿಗಳು ಇವನ ಗುರ್ವಾಜ್ಞಾ ಪರಿಪಾಲನೆಗೆ ಮೆಚ್ಚಿಕೊಂಡು ಎಲ್ಲ ವಿದ್ಯೆಗಳನ್ನೂ ಹೇಳಿಕೊಟ್ಟರು. ಗುರುಗಳಿಗೆ ಶಿಷ್ಯರು ಎಷ್ಟು ವಿಧೇಯರಾಗಿರುತ್ತಿದ್ದರೆಂಬ ಆದರ್ಶ ಈ ಚರಿತ್ರೆಯಲ್ಲಿ ಸ್ಪಷ್ಟವಾಗಿದೆ.

## ಗಾಲವ-ವಿಶ್ವಾಮಿತ್ರಮಹರ್ಷಿ

ಗಾಲವನು ವಿಶ್ವಾಮಿತ್ರರ ಮುಖ್ಯಶಿಷ್ಯರಲ್ಲೊಬ್ಬ. ಈತನ ಚರಿತ್ರೆ ಮಹಾಭಾರತದ ಉದ್ಯೋಗ ಪರ್ವದಲ್ಲುಕ್ತವಾಗಿದೆ. ಈತ ವಿಶ್ವಾಮಿತ್ರರಲ್ಲಿ ಶುಕ್ಲ ಯಜುರ್ವೇದವನ್ನು ಸಾಂಗವಾಗಿ ಅಧ್ಯಯನ ಮಾಡಿ, ಆಮೇಲೆ ಗುರುಗಳಿಗೆ ಗುರುದಕ್ಷಿಣೆ ಕೊಡಲಿಚ್ಛಿಸಿದಾಗ ವಿಶ್ವಾಮಿತ್ರಮಹರ್ಷಿಗಳು 'ಗಾಲವ ನಿನ್ನ ಗುರುಶುಶ್ರೂಷೆಗೆ ಮೆಚ್ಚಿದ್ದೇನೆ. ಇನ್ನು ಗುರುದಕ್ಷಿಣೆ ಎಂದೇನೂ ಬೇಡ, ಹೋಗಿಬಾ ಒಳ್ಳೆಯದಾಗಲಿ' ಎಂದು ಹೇಳಿದರೂ ಕೇಳದ ಗಾಲವನನ್ನು ಕುರಿತು 'ಒಂದು ಕಿವಿ ಕಪ್ಪಗೂ ಮತ್ತೆಲ್ಲಾ ಶರೀರ ಶುದ್ಧ ಬೆಳ್ಳಗೂ ಇರುವಂತಹ 800 ಕುದುರೆಗಳನ್ನು ಗುರುದಕ್ಷಿಣೆಯಾಗಿ ಕೊಡು ಎಂದಾಜ್ಞಾಪಿಸಿದರು. ಅಂತಹ ಕುದುರೆಗಳಿಗಾಗಿ ಅಲೆದಾಡಿ ಸಾಕಾಗಿ ಗಾಲವನು ವಿಷ್ಣುವನ್ನು ಮೊರೆ ಹೊಕ್ಕು ವಿಷ್ಣುವಾಹನನಾದ ಗರುಡನನ್ನು ಪಡೆದು ಜಗತ್ತೆಲ್ಲಾ ಸುತ್ತಿ ಸುಸ್ತಾಗಿ, ಗುರುದಕ್ಷಿಣೆ ಕೊಡಲಾಗಲಿಲ್ಲವಲ್ಲಾ ಎಂಬ ಪಶ್ಚಾತ್ತಾಪದಿಂದ ಬೆಂದು ದೇಹತ್ಯಾಗ ಮಾಡಿಕೊಳ್ಳಲೆತ್ನಿಸಿದಾಗ ಗರುಡನು ಮಾನವಜನ್ಮದ ಮಹತ್ವವನ್ನು ತಿಳಿಸಿ ಅವನನ್ನು ಪ್ರತಿಷ್ಠಾನ ನಗರದ ಮಹಾರಾಜನಾದ ಯಯಾತಿಯಲ್ಲಿಗೆ ಕರೆದೊಯ್ದು ವಿಷಯ ತಿಳಿಸಿ, ಅವನ ಮಗಳಾದ ಮಾಧವಿಯ ನೆರವಿನಿಂದ 600 ಕುದುರೆಗಳನ್ನೂ ಸಂಪಾದಿಸಿ, ಮಿಕ್ಕ 200 ಕುದುರೆಗಳಿಗೆ ಬದಲಾಗಿ ಆ ಮಾಧವಿಯನ್ನೇ ಮಹರ್ಷಿಗಳ ಸೇವೆಗರ್ಪಿಸಿ ಗುರುದಕ್ಷಿಣೆಯನ್ನರ್ಪಿಸಿದ ತೃಪ್ತಿಯನ್ನು ಪಡೆದ. ಈ ಚರಿತ್ರೆಯಿಂದ ನಮಗೆ ತಿಳಿಯುವ ಅಂಶ, ಶಿಷ್ಯನು ದುರಹಂಕಾರಿಯಾದಾಗ ಯಾವ ಫಲ ಅನುಭವಿಸಬೇಕಾಗುತ್ತದೆ ಎಂಬುದು.

## ಜೈಮಿನಿ ಕೃಷ್ಣದ್ವೈಪಾಯನಮಹರ್ಷಿ

ಜೈಮಿನಿ ಮಹರ್ಷಿ ಸಮಗ್ರವಾಗಿ ವೇದಗಳನ್ನು ಕೃಷ್ಣದ್ವೈಪಾಯನ ವ್ಯಾಸಮಹರ್ಷಿಗಳಲ್ಲಿ, ಅಧ್ಯಯನ ಮಾಡಿ, ತನ್ನ ಮೂವರು ಸಹಪಾಟಿಗಳಾದ, ಋಗ್ವೇದ ಸಂಪನ್ನನಾದ ಪೈಲಮುನಿ, ಯಜುರ್ವೇದ ಸಂಪನ್ನನಾದ ವೈಶಂಪಾಯನ, ಮತ್ತು ಅಥರ್ವಣವೇದನಿಪುಣನಾದ ಸುಮಂತು –ಇವರ ಸಹಾಯದಿಂದ ನಾಲ್ಕುವೇದಗಳಿಗೂ ಸೂತ್ರಗಳನ್ನು ಬರೆದುದೂ ಅಲ್ಲದೇ ವೇದಭಾಗದ ಕರ್ಮಕಾಂಡ ಪ್ರತಿಪಾದಕವಾದ ಪೂರ್ವ ಮೀಮಾಂಸಾಶಾಸ್ತ್ರವನ್ನೂ ಬರೆದ. ಮತ್ತೂ ನ್ಯಾಯಮಾಲಾವಿಸ್ತರ ಮುಂತಾದ ಅನೇಕ ಗ್ರಂಥಗಳನ್ನು ಬರೆದು ಮಹರ್ಷಿಗಳಸನ್ನಿಧಿಯಲ್ಲಿ ಕಲಿತವಿದ್ಯೆಗೊಂದು ಶಾಶ್ವತ ಸ್ಥಾನ ಕಲ್ಪಿಸಿ, ಆ ವಿಧವಾದ ಗುರುದಕ್ಷಿಣೆಯನ್ನರ್ಪಿಸಿದ ಆದರ್ಶ ಶಿಷ್ಯಮಣಿ.

ಈತನೂ ಸಹ ಒಂದು ಭಾರತಗ್ರಂಥವನ್ನು ರಚಿಸಿರುವನೆಂದು ಪ್ರತೀತಿ ಇದ್ದರೂ, ಅಂತಹ ಭಾರತ ಪ್ರಚಾರಕ್ಕೆ ಬರದೇಹೋಯಿತು. ಈತನ



ಚರಿತ್ರೆಯಿಂದ ಅರಿಯುವ ಅಂಶ ಗುರುಸನ್ನಿಧಿಯಲ್ಲಿ ಕಲಿತವಿದ್ಯೆಯನ್ನು ಅಭಿವೃದ್ಧಿ ಪಡಿಸಿದರೆ ಅದೊಂದು ಗುರುದಕ್ಷಿಣೆಯಾಗುತ್ತದೆ ಎಂಬುದು.

## ಏಕಲವ್ಯ - ದ್ರೋಣಾಚಾರ್ಯ :

ಮಹಾಭಾರತದ ಅರಣ್ಯಪರ್ವದಲ್ಲಿ ಬರುವ ಇವರ ಚರಿತ್ರೆ, ಐತಿಹಾಸಿಕವಾಗಿ ಪ್ರಸಿದ್ಧ ಕಥೆ. ಗುರುಶಿಷ್ಯರ ಸಂಬಂಧ ಇಲ್ಲಿ ಅತ್ಯನೋಘವಾಗಿ ಚಿತ್ರಿಸಲ್ಪಟ್ಟಿದೆ. ಈ ಚರಿತ್ರೆಯಲ್ಲಿ, ಶಿಷ್ಯನಲ್ಲಿ ಬ್ರಹ್ಮವಿದ್ಯಾಕಾಂಕ್ಷೆ ಇಲ್ಲದಿದ್ದರೂ ತಾನು ಕಲಿಯಲಿಚ್ಛಿಸಿದ ಧನುರ್ವೇದವನ್ನು ಪಡೆದು ಅದರಲ್ಲೇ ಅತ್ಯಂತ ಪಾರಂಗತನಾದ ವಿಷಯವಿದೆ. ಏಕಲವ್ಯನು ಸ್ವತಃ ದ್ರೋಣಾಚಾರ್ಯರಲ್ಲಿ ವಿದ್ಯೆಯನ್ನು ಪಡೆಯಲು ವಿಫಲನಾದಾಗ, ಅವರ ಪ್ರತಿಮೆಯೊಂದನ್ನು ಸ್ಥಾಪಿಸಿ ಅದರ ಮುಂದೆ ಅನನ್ಯಮನಸ್ಕನಾಗಿ, ಏಕಭಕ್ತಿಯಿಂದ ಧನುರ್ವೇದವನ್ನಭ್ಯಸಿಸಿ ಪ್ರಬಲ ಧನುರ್ವೇದ ನಿಪುಣನಾದ. ದ್ರೋಣಾಚಾರ್ಯರು ಇವನಿಗೆ ಮಾನಸಿಕ ಆಚಾರ್ಯರು, ಪ್ರತ್ಯಕ್ಷವಾಗಿ ಧನುರ್ವೇದವನ್ನಭ್ಯಸಿಸಿದ ದ್ರೋಣಾಚಾರ್ಯರ ಶಿಷ್ಯರನ್ನೂ ಮೀರಿಸಿ, ಪರೋಕ್ಷವಾಗಿ ಧನುರ್ವೇದವನ್ನು ಪಡೆದ ಈ ಶಿಷ್ಯ ದ್ರೋಣಾಚಾರ್ಯರ ಶಿಷ್ಯರಲ್ಲೇ ಅತ್ಯುಚ್ಚ ಶ್ರೇಣಿಯ ಶಿಷ್ಯನೆಂದು ಪ್ರಸಿದ್ಧನಾಗಿದ್ದಾನೆ. ದ್ರೋಣಾಚಾರ್ಯರು ಇವನಲ್ಲಿಗೆ ಬರಲೂ ಇಲ್ಲ, ಇವನಾರೆಂದೂ ಅವರಿಗೆ ತಿಳಿಯದು. ಒಂದುಸಲ ಅರ್ಜುನನು, ಏಕಲವ್ಯನು ವಾಸಿಸುತ್ತಿದ್ದ ಸ್ಥಳಕ್ಕೆ

ಶ್ರೀ ವಿ. ಎಸ್. ರಾಮಾನುಜ ಆಚಾರ್ಯ

[illegible]
ಯನ್ನು ಕಂಡು ಆಶ್ಚರ್ಯದಿಂದ, ಅವನ ಗುರುಗಳು ಯಾರೆಂದು ಕೇಳಿದಾಗ, ಅವನು ದ್ರೋಣರ ಪ್ರತಿಮೆಯನ್ನು ತೋರಿಸಲು, ಅಸೂಯಾಪರನಾದ ಅರ್ಜುನ ದ್ರೋಣಾಚಾರ್ಯರಲ್ಲಿಗೆ ಹೋಗಿ, ವಿಷಯ ತಿಳಿಸಿ, ತನಗೆ ಅವರಿಂದ ಬಹಳ ದ್ರೋಹವಾಗಿದೆಯೆಂದೂ, ಏಕಲವ್ಯನಲ್ಲಿಗೆ ಹೋಗಿ ಗುರುದಕ್ಷಿಣೆಯಾಗಿ ಅವನ ಅಂಗುಷ್ಠ ಪಡೆದರೆ, ಆಗ ಅವನಿಗೆ ಧನುರ್ವೇದ ಫಲಿಸದೇ ತಾನೇ ಪ್ರತಿಷ್ಠಿತನಾಗಬಹುದೆಂದೂ, ದ್ರೋಣಾಚಾರ್ಯರಲ್ಲಿ ವಿಜ್ಞಾಪಿಸಿಕೊಂಡು, ಅವರನ್ನು ಪ್ರೇರೇಪಿಸಿ ಏಕಲವ್ಯನ ಹತ್ತಿರ ಕಳುಹಿಸಿದ. ದ್ರೋಣಾಚಾರ್ಯರೂ ಅದರಂತೆ ಏಕಲವ್ಯನ ಹತ್ತಿರ ಹೋಗಿ ಗುರುದಕ್ಷಿಣೆಯಾಗಿ ಅವನ ಅಂಗುಷ್ಠ ಕೊಡುವಂತೆ ಆಜ್ಞಾಪಿಸಲು, ತಕ್ಷಣವೇ ಏಕಲವ್ಯನು ಕೊಡಲಿಯಿಂದ ಅಂಗುಷ್ಠವನ್ನು ಕತ್ತರಿಸಿ ದ್ರೋಣಾಚಾರ್ಯರಿಗೆ ಗುರುದಕ್ಷಿಣೆಯಾಗಿ ನೀಡಿದ. ಇಂತಹ ಆದರ್ಶ ಶಿಷ್ಯ, "ನ ಭೂತೋ ನ ಭವಿಷ್ಯತಿ".

## ನಕ್ಷತ್ರಿಕ-ವಿಶ್ವಾಮಿತ್ರಮಹರ್ಷಿ :

ಭಾರತ ಸಭಾಪರ್ವದಲ್ಲಿ ಬರುವ ಇವರ ಕಥೆಯಲ್ಲಿ ಒಂದು ವಿಶೇಷ ಇದೆ. ಇಲ್ಲಿ ಗುರುಶಿಷ್ಯರ ಸಂಬಂಧದ ರೀತಿಯೇ ಬೇರೆ. ಗುರುವಾದ ವಿಶ್ವಾಮಿತ್ರರು ನಿಯಮಿಸಿದ ಕಾರ್ಯವನ್ನು ಶತಾಯಗತಾಯ ಸಾಧಿಸಿಯೇ ತೀರಿದ ಹಟವಾದಿ ಶಿಷ್ಯ ನಕ್ಷತ್ರಿಕ. ಸತ್ಯನಿಷ್ಠನಾದ ಹರಿಶ್ಚಂದ್ರನಿಂದ ವಿಶ್ವಾಮಿತ್ರನಿಗೆ ಬರಬೇಕಾದ ದಕ್ಷಿಣಾದ್ರವ್ಯವನ್ನು ಪೂರ್ತಿಯಾಗಿ ಪಡೆಯುವವರೆಗೂ, ಹರಿಶ್ಚಂದ್ರನ ...ಯಲ್ಲೇ ಇದ್ದೂ, ಅವನಿಗೆ ಸಕಲ ವಿಧವಾದ ತೊಂದರೆಗಳನ್ನೂ ಕೊಟ್ಟು, ಪೂರ್ಣ ದಕ್ಷಿಣಾದ್ರವ್ಯವನ್ನು ಪಡೆದು ಅನಂತರವೇ ತನ್ನ ಗುರುಗಳಾದ ವಿಶ್ವಾಮಿತ್ರರ ಬಳಿಗೆ ಹೋದವ ಈ ನಕ್ಷತ್ರಿಕ. ಬಹಳ ಸತಾಯಿಸುವ ಯಾರನ್ನೂ ಈಗ ನಕ್ಷತ್ರಿಕ ಎಂದು ಕರೆಯುವುದು ರೂಢಿ. ಅಷ್ಟು ನಿಯಮವಾಗಿ ಗುರುಗಳ ಆಜ್ಞೆ ಪಾಲಿಸಿದ ನಿಷ್ಠಾವಂತ ಶಿಷ್ಯನೀತ.

## ಕಚ-ಶುಕ್ರಾಚಾರ್ಯ :

ಇವರ ಕಥೆ ಮಹಾಭಾರತದ ಆದಿಪರ್ವದಲ್ಲಿದೆ. ಇಲ್ಲಿಯ ಗುರುಶಿಷ್ಯ ಸಂಬಂಧ ಬ್ರಹ್ಮವಸ್ತುವನ್ನು ಕುರಿತದ್ದಲ್ಲ. ಸತ್ತವರನ್ನು ಬದುಕಿಸುವ "ಮೃತ ಸಂಜೀವಿನೀ" ವಿದ್ಯೆಯನ್ನು ಕಲಿಯುವಂತೆ ದೇವತೆಗಳಿಂದ ಪ್ರೇರಿತನಾಗಿ, ದೇವಗುರುವಾದ ಬೃಹಸ್ಪತ್ಯಾಚಾರ್ಯರ ಮಗನಾದ ಕಚನೆಂಬವನು ಆ ವಿದ್ಯೆಯನ್ನು ಬಲ್ಲ ರಾಕ್ಷಸಗುರುಗಳಾದ ಶುಕ್ರಾಚಾರ್ಯರನ್ನು ಆಶ್ರಯಿಸಿದ. ಅವರಲ್ಲಿ ನಿಷ್ಠೆಯಿಂದ ಗುರುಕುಲ ವಾಸಮಾಡುತ್ತಿದ್ದ ಕಾಲದಲ್ಲಿ, ಇವನಿಗೂ, ಶುಕ್ರಾಚಾರ್ಯರ ಮಗಳಾದ ದೇವಯಾನಿಗೂ ಪ್ರೀತಿ ವಿಶ್ವಾಸಗಳೇರ್ಪಟ್ಟವು. ಕಚನು ದೇವಗುರುಗಳ ಮಗನಾದುದರಿಂದ ರಾಕ್ಷಸರಿಗೆ ಅವನನ್ನು ನಾಶಮಾಡುವ ಆತಂಕ. ಆದುದರಿಂದ ಹೊಂಚಿಕೊಂಡು ಕಚನನ್ನು ಕೊಂದುಬಿಟ್ಟರು. ಮಗಳ ಪ್ರೀತಿಗಾಗಿ, ಅವಳಿಂದ ಪ್ರೇರಿತರಾಗಿ ಶುಕ್ರಾಚಾರ್ಯರು ಅವನನ್ನು ಬದುಕಿಸಿದರು. ಆದರೆ ರಾಕ್ಷಸರು ಬಿಡಲಿಲ್ಲ. ಮತ್ತೆ ಕಚನನ್ನು ಕೊಂದು, ಅವನನ್ನು ಸುಟ್ಟು, ಅವನ ಬೂದಿಯನ್ನು ಸುರೆಯಲ್ಲಿ ಕಲಿಸಿ, ಅಸುರ ಗುರುಗಳಿಗರ್ಪಿಸಿಯೇ ಬಿಟ್ಟರು. ಈಸಲ ಕಚನನ್ನು ಬದುಕಿಸುವುದು ಕಷ್ಟವೆಂದರಿತರೂ, ಮಗಳ ದುಃಖ ನೋಡಲಾರದೇ, ತನ್ನ ಹೊಟ್ಟೆಯಲ್ಲಿದ್ದ ಕಚನಿಗೆ ನಿರ್ಬಂಧವಾಗಿ 'ಮೃತ ಸಂಜೀವಿನೀವಿದ್ಯೆ' ಕಲಿಸಿಕೊಟ್ಟು, ಅವನನ್ನು ತಮ್ಮ ಹೊಟ್ಟೆಯನ್ನು ಸೀಳಿಕೊಂಡು ಬರುವಂತೆಯೂ, ಅಮೇಲೆ ಅದೇ ವಿದ್ಯೆಯಿಂದ ತಮ್ಮನ್ನು ಬದುಕಿಸುವಂತೆಯೂ ಆಜ್ಞಾಪಿಸಿದರು. ಕಚನು ಹಾಗೆಯೇ ಹೊಟ್ಟೆ ಸೀಳಿಕೊಂಡು ಹೊರಬಂದು ಅವರು ಕಲಿಸಿಕೊಟ್ಟ ವಿದ್ಯೆಯಿಂದ ಅವರನ್ನು ಬದುಕಿಸಿದ.

## ನಾರದಮಹರ್ಷಿ-

## ವಾಲ್ಮೀಕಿಮಹರ್ಷಿ

ಗುರುವಿನ ಶುಶ್ರೂಷೆಮಾಡಿ ವಿದ್ಯೆಯನ್ನು ಪಡೆಯುವ ಶಿಷ್ಯರನೇಕರಿದ್ದಾರೆ. ಗುರುಗಳೇ ಯೋಗ್ಯನಾದ ಶಿಷ್ಯನನ್ನು ಹುಡುಕಿಕೊಂಡು ಬಂದು, ಅವನಿಗೆ ಬ್ರಹ್ಮವಿದ್ಯೆಯನ್ನು ಕಲಿಸುವುದೊಂದು ವಿಶೇಷ. ಅಂತಹ ವಿಶೇಷವನ್ನು ಈ ಗುರುಶಿಷ್ಯರಲ್ಲಿ ಕಾಣಬಹುದಾಗಿದೆ. ಇಲ್ಲಿ ಶಿಷ್ಯ, ತಪಸ್ಸಿನಲ್ಲಿ ನಿರತರಾದ ವಾಲ್ಮೀಕಿ ಮಹರ್ಷಿ. ಗುರುವು, ತಪಸ್ಸಿನಲ್ಲೂ ವೇದಾಧ್ಯಯನದಲ್ಲೂ ನಿರತರಾಗಿ ವೇದಾರ್ಥಗಳನ್ನು ಚೆನ್ನಾಗಿ ಬಲ್ಲ, ಮತ್ತು ಅವುಗಳನ್ನು ಮನದಟ್ಟಾಗುವಂತೆ ಉಪದೇಶ ಮಾಡಬಲ್ಲ ವಾಕ್ಚಾತುರ್ಯವುಳ್ಳವರಾಗಿ, ಋಷಿಪುಂಗವರಾಗಿದ್ದ ನಾರದಮಹರ್ಷಿಗಳು. ಇಬ್ಬರೂ ಬ್ರಹ್ಮಜ್ಞಾನಿಗಳು. ಶಾರೀರಕ, ವಾಚಕ ಮತ್ತು ಮಾನಸಿಕ ತಪಸ್ಸಿನಲ್ಲಿ ಶ್ರೇಷ್ಠರು. ಭಗವದ್ಗೀತೆಯ 17ನೇ ಅಧ್ಯಾಯದ 14, 15 ಮತ್ತು 16ನೇ ಶ್ಲೋಕಗಳಲ್ಲಿ ವ್ಯಕ್ತವಾದಂತೆ, ಶಾರೀರಕ ತಪಸ್ಸಾದುದು, ದೇವಬ್ರಾಹ್ಮಣ, ಆಚಾರ್ಯ, ಜ್ಞಾನಿಗಳನ್ನು ಪೂಜಿಸುವಿಕೆ ಮತ್ತು ಮತ್ತು ಶರೀರದ ಅಂಗಾಂಗಗಳನ್ನು ಅವುಗಳ ಋಜುಸ್ವಭಾವದಲ್ಲಿ ಇಟ್ಟುಕೊಳ್ಳುವಿಕೆ ಮತ್ತು ಬ್ರಹ್ಮಚರ್ಯೆ, ಅಹಿಂಸಾಪಾಲನ ಇವುಗಳಲ್ಲಿ ನಿಷ್ಠೆಯಿಂದಿರುವಿಕೆ, ಮತ್ತೊಬ್ಬರಿಗೆ ನೋವನ್ನುಂಟುಮಾಡದೆಯೂ, ಸತ್ಯವೂ, ಪ್ರಿಯವೂ, ಹಿತವೂ ಆಗಿರುವಂತೆ ಮಾತನಾಡುವಿಕೆ, ಸ್ವಾಧ್ಯಾಯ, ಭಗವತ್ತತ್ವ ಬೋಧಕ ಗ್ರಂಥಪಠನ ಇವುಗಳು ವಾಚಿಕ ತಪಸ್ಸು. ಮನಶ್ಶಾಂತಿ, ಸೌಮ್ಯತ್ವ, ಮೌನ, ಇಂದ್ರಿಯನಿಗ್ರಹ, ಚಿತ್ತಶುದ್ಧಿ-ಇವು ಮಾನಸಿಕ ತಪಸ್ಸು, ಈ ಮೂರುವಿಧ ತಪಸ್ಸುಗಳಲ್ಲಿ ನಿಷ್ಠರು ಈ ಗುರು ಶಿಷ್ಯರು, ನಾರದ ಮಹರ್ಷಿಗಳ ಹೆಸರಿನ ಸಾರ್ಥಕತೆ ಅವರ ನಡತೆಯಲ್ಲಿ ಎದ್ದುಕಾಣುತ್ತದೆ. 'ನರ' ಎಂದು ನಾರಾಯಣನಿಗೆ ಹೆಸರು. "ನಾರ" ಎಂದರೆ ನಾರಾಯಣ ವಿಷಯಕ ಜ್ಞಾನ. ಅಂತಹ ಭಗವದ್‌ಜ್ಞಾನೋಪದೇಶ ನಿರತರು ನಾರದರು. ಅಂತಹವರನ್ನು ಅನೇಕ ವಿಧವಾಗಿ ಪ್ರಶ್ನಿಸಿ ರಾಮಾಯಣೋಪದೇಶವನ್ನು ಪಡೆಯುತ್ತಾರೆ ಶಿಷ್ಯರಾದ ವಾಲ್ಮೀಕಿಗಳು.

ಇಲ್ಲಿ ಶಿಷ್ಯನಾದ ವಾಲ್ಮೀಕಿಗೆ ಮಾಡಿದ ಉಪದೇಶ ಸಾರ್ಥಕವಾಗಿ, ಆ ಚಂದ್ರಾರ್ಕವಾಗಿ ಎಲ್ಲರಿಂದಲೂ ಹೊಗಳಲ್ಪಡುವಂತಿರುವ ಇತಿಹಾಸ ಶ್ರೇಷ್ಠವಾದ ರಾಮಾಯಣ ಮಹಾಗ್ರಂಥದ ಉದ್ಭವವಾಯಿತು. ಇದರಿಂದ ಹೇಳಿಕೊಟ್ಟ ಗುರುವಿಗೂ ಹೇಳಿಸಿಕೊಂಡ ಶಿಷ್ಯನಿಗೂ ಅಪಾರ ಕೀರ್ತಿ ಲಭ್ಯವಾಗಿ, ನಮಗೆಲ್ಲರಿಗೂ ಅಂತಹ ಗ್ರಂಥ ಪ್ರಾಪ್ತವಾಗಿದೆ. ಈ ಅಂಶವನ್ನು ವಾಲ್ಮೀಕಿರಾಮಾಯಣದ ಬಾಲಕಾಂಡದಲ್ಲಿ ಕಾಣಬಹುದು. ★

# ಕರ್ನಾಟಕದ ಅನಂತಸೂರಿ

ಶ್ರೀ ಲ. ನ. ಶಾಸ್ತ್ರಿ

ವೈಷ್ಣವ ಮತವು ಕರ್ನಾಟಕದ ಅನೇಕ ಭಾಗಗಳಲ್ಲಿ ವ್ಯಾಪಿಸಿಕೊಂಡಿತ್ತು. ಎಲ್ಲೆಲ್ಲಿ ವಿಷ್ಣುವಿನ ದೇವಸ್ಥಾನಗಳು ಇದ್ದವೋ ಅಲ್ಲೆಲ್ಲಾ ವಿಷ್ಣುಭಕ್ತರು – ವೈಷ್ಣವರು ಹರಡಿಕೊಂಡಿದ್ದರು. ಮಾರೇಹಳ್ಳಿ, ತಡಿಮಾಲಂಗಿ, ಮದ್ದೂರು, ತೊಂಡನೂರು, ಸಾಲಿಗ್ರಾಮ–ಇವು ವೈಷ್ಣವರ ವಾಸಸ್ಥಳಗಳಾಗಿದ್ದವು. ಅಂತಹ ಸ್ಥಳಗಳಲ್ಲಿ ಶ್ರೀರಂಗಪಟ್ಟಣವೂ ಒಂದು. ಈ ಊರು ಸರ್ಪದ ಮೇಲೆ ಮಲಗಿರುವ ಶ್ರೀರಂಗನಾಥನ ದೇವಾಲಯವನ್ನು ಹೊಂದಿದೆ. ಕಾವೇರಿ ತೀರದಲ್ಲಿರುವ ಈ ಸ್ಥಳ ಬಹಳ ಪವಿತ್ರವಾದುದು, ಆದಿರಂಗವೆಂದು ಪ್ರಸಿದ್ಧವಾದುದು.

ಶ್ರೀರಂಗಪಟ್ಟಣದ ಹತ್ತಿರ ಕಿರಂಗೂರು ಎಂಬುದೊಂದು ಸಣ್ಣ ಅಗ್ರಹಾರವಿದೆ. ಕಾವೇರಿಯ ಪೂರ್ವಕ್ಕೆ ಇರುವ ಅದು ಈಗ ಒಂದು ಸಣ್ಣ ಗ್ರಾಮ, ಅಲ್ಲಿ ಕೇಶವಾಚಾರ್ಯ ಎಂಬೊಬ್ಬ ಗೃಹಸ್ಥನಿದ್ದನು. ಆತನು ದೈವಭಕ್ತ, ತುಂಬಾ ಸಾಧು ಸ್ವಭಾವದವನು. ಆತನ ಪತ್ನಿ ಶ್ರೀರಂಗಮ್ಮನೂ ಅಷ್ಟೇ ದೈವಭಕ್ತೆ, ಸುಶೀಲೆ. ಗಂಡ ಹೆಂಡತಿ ಶ್ರೀರಂಗನಾಥನ ಪೂಜೆ ಮಾಡಿ ತಮಗೆ ಮಕ್ಕಳಾಗುವಂತೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಿಕೊಂಡಿದ್ದರು. ಒಂದುರಾತ್ರಿ ಅವರ ಕನಸಿನಲ್ಲಿ ಆದಿಶೇಷನು ಕಾಣಿಸಿಕೊಂಡನು. ತಾನೇ ಅವರ ಮಗನಾಗಿ ಹುಟ್ಟುವುದಾಗಿ ವರವನ್ನಿತ್ತನು. ಆ ದಂಪತಿಗಳ ಸಂತೊಷಕ್ಕೆ ಪಾರವೇಇಲ್ಲ. ಮುಂದೆ ಅವರಿಗೆ ಒಂದು ಗಂಡುಮಗು ಜನಿಸಿತು. ಅವರು ಆದಿಶೇಷನ ಹೆಸರಾದ ಅನಂತ ಎಂದು ಮಗುವಿಗೆ ನಾಮಕರಣ ಮಾಡಿದರು. ಆತನೇ ಮುಂದೆ ಅನಂತಸೂರಿ ಎಂದು ಖ್ಯಾತನಾದುದು.

ಶ್ರೀರಾಮಾನುಜರು ಆದಿಶೇಷನ ಅವತಾರವೆಂದೇ ಭಕ್ತರು ನಂಬುತ್ತಾರೆ. ಅನಂತಸೂರಿಯವರೂ ಆದಿಶೇಷನ ಅವತಾರವೆಂದೇ ನಂಬುತ್ತಾರೆ. ಹಿಂದೆ ಶ್ರೀಮಹಾವಿಷ್ಣು ತಾನೇ ನರ ಮತ್ತು ನಾರಾಯಣ ಋಷಿಗಳಾಗಿ ಹುಟ್ಟಿದ್ದನೆಂದೂ, ಹಾಗೆಯೇ ಈಗ ಆದಿಶೇಷನು ರಾಮಾನುಜ ಮತ್ತು ಅನಂತಸೂರಿಯರಾಗಿ ಹುಟ್ಟಿರುವನೆಂದು ವೈಷ್ಣವರು ನಂಬುತ್ತಾರೆ. ರಾಮಾನುಜರ ಕರ್ನಾಟಕದ ಶಿಷ್ಯರಲ್ಲಿ ಅನಂತಸೂರಿಯವರು ತುಂಬಾ ಪ್ರಮುಖರು.

ಅನಂತಸೂರಿಗೆ ಬಾಲ್ಯ ವಿದ್ಯಾಭ್ಯಾಸ ತನ್ನ ತಂದೆಯವರಿಂದಲೇ ನಡೆಯಿತು. ಅನಂತರ ಆತನು ಆ ಅಗ್ರಹಾರದಲ್ಲಿಯೇ ಇದ್ದ ಇತರ ವಿದ್ವಾಂಸರ ಹತ್ತಿರವೂ ಸ್ವಲ್ಪಕಾಲ ಓದಿದನು. ಇನ್ನೂ ಓದಬೇಕೆಂಬ ಆಸೆಯಿಂದ ಅನಂತಸೂರಿಯು ಮನೆಯನ್ನು, ಊರನ್ನು ಬಿಟ್ಟು ಹೊರಟನು.

ರಾಮಾನುಜರು ಆಗ ಶ್ರೀರಂಗದಲ್ಲಿದ್ದರು. ವಿಷ್ಣುವೇ ದೊಡ್ಡ ದೇವರು. ಎಲ್ಲ ಜೀವಿಗಳ ಮತ್ತು ಪ್ರಪಂಚದ ಹುಟ್ಟುವಿಕೆ, ಇರುವಿಕೆ ಮತ್ತು ನಾಶಕ್ಕೆ ಆತನೇ ಕಾರಣ. ಎಲ್ಲರೂ ಆತನನ್ನೇ ಆಶ್ರಯಿಸಬೇಕು. ಎಲ್ಲರಿಗೂ ಸುಖ ಸಂತೋಷ, ಶಾಂತಿಗಳನ್ನು ಕೊಡುವವನೂ ಆತನೇ ಎಂದು ಅವರು ಬೋಧಿಸುತ್ತಿದ್ದರು. ಅವರನ್ನು ಆಶ್ರಯಿಸಿ ಬಹಳ ಜನ ವಿದ್ಯಾರ್ಥಿಗಳು ದೂರದೂರದ ಊರುಗಳಿಂದ ಬರುತ್ತಿದ್ದರು.

ಅನಂತಸೂರಿಯೂ ಅವರನ್ನು ಆಶ್ರಯಿಸಿದನು. ತನಗೆ ವಿದ್ಯಾದಾನವನ್ನೂ ಜ್ಞಾನಭಿಕ್ಷೆಯನ್ನು ಕೊಡಬೇಕೆಂದು ಬೇಡಿಕೊಂಡನು. ಅತನೊಡನೆ ಯಜ್ಞೇಶ, ಮರುದೂರು ನಂಬಿ, ತೊಂಡನೂರು ನಂಬಿ ಎಂಬ ಯುವಕರೂ ಇದ್ದರೂ. ಇವರೆಲ್ಲ ಕರ್ನಾಟಕದವರು. ಈ ತರುಣರನ್ನು ರಾಮಾನುಜರು ಆದರದಿಂದ ಬರಮಾಡಿಕೊಂಡರು. ಇವರ ಅಪೇಕ್ಷೆಯನ್ನು ಕೇಳಿದರು. "ಮಕ್ಕಳೇ, ನೀವು ದೂರದ ಕರ್ನಾಟಕದಿಂದ ಜ್ಞಾನಭಿಕ್ಷೆಗಾಗಿ ಇಲ್ಲಿಯವರೆಗೆ ಬಂದಿದ್ದೀರಿ. ನಿಮ್ಮ ಶ್ರದ್ಧೆ, ಆಸಕ್ತಿಗಳು ನನಗೆ ಸಂತೊಷವುಂಟು ಮಾಡಿವೆ. ನಿಮಗೆ ನನ್ನಿಂದಾಗುವ ಸಹಾಯವನ್ನು ಮಾಡುತ್ತೇನೆ" ಎಂದು ಹೇಳಿದರು.

ರಾಮಾನುಜರು ಅನಂತಸೂರಿಯನ್ನೂ ಆತನ ಮಿತ್ರರನ್ನೂ ತಮ್ಮ ಹಿರಿಯ ಶಿಷ್ಯರಾಗಿದ್ದ ದೇವರಾಜಮುನಿಯ ಹತ್ತಿರ ಕಳುಹಿಸಿದರು. ಅವರು ಇವರೆಲ್ಲರಿಗೂ ದೀಕ್ಷೆಯನ್ನು ಕೊಟ್ಟು ಶ್ರೀ ವೈಷ್ಣವ ಮತಕ್ಕೆ ಸೇರಿಸಿಕೊಂಡರು. ಅನಂತರ ಅನಂತಸೂರಿಯ ವಿದ್ಯಾಭ್ಯಾಸ ರಾಮಾನುಜರ ಬಳಿ ಪ್ರಾರಂಭವಾಯಿತು. ಅನಂತಸೂರಿ ಹೆಸರಿಗೆ ತಕ್ಕಂತೆ "ಸೂರಿ"ಯೇ ಆಗಿದ್ದರು. ಸೂರಿ ಎಂದರೆ ಪಂಡಿತ, ವಿದ್ವಾಂಸ ಎಂದರ್ಥ. ಅವರು ಆವೇಳೆಗಾಗಲೇ ಹಲವಾರು ಶಾಸ್ತ್ರಗಳನ್ನು ಓದಿ ತಿಳಿವನ್ನು ಪಡೆದುಕೊಂಡಿದ್ದರು. ರಾಮಾನುಜರ ಬಳಿ ನಾಲಾಯಿರ ಪ್ರಬಂಧವೆಂದು ಹೆಸರಾದ ತಮಿಳು ವೈಷ್ಣವ ಸಂತರ ಭಕ್ತಿಗೀತೆಗಳನ್ನು ಹೇಳಿಸಿಕೊಂಡರು.

ಒಂದುದಿನ ರಾಮಾನುಜರು ನಮ್ಮಾಳ್ವಾರರ ತಿರುವಾಯ್‌ಮೊಳಿ ಎಂಬ ಭಕ್ತಿಗೀತೆಯನ್ನು ಕುರಿತು ಪಾಠಮಾಡುತ್ತಿದ್ದರು. ಅದರಲ್ಲಿ ಬರುವ ತಿರುಪತಿಯ ಮಹಿಮೆಯನ್ನು ವರ್ಣಿಸುತ್ತಾ "ತಿರುಪತಿಯಲ್ಲಿ ಶ್ರೀ ವೆಂಕಟೇಶ್ವರನ ಪೂಜೆಗೆ ಹೂಗಳನ್ನು ಬೆಳೆಸಲು ಒಂದು ತೋಟವು ಅಗತ್ಯವಾಗಿದೆ. ಹೂದೋಟವನ್ನು ನಿರ್ಮಿಸಿ ಆ ಸ್ವಾಮಿಯ ಸೇವೆ ಮಾಡಿಕೊಂಡಿರಲು ನಿಮ್ಮಲ್ಲಿ ಯಾರು ಸಿದ್ಧರಿದ್ದೀರಿ? ಎಂದು ಕೇಳಿದರು.



[illegible] ಪ್ರತ್ಯುತ್ತರ ಬರಲಿಲ್ಲ. ಆಗ ಅನಂತ ಸೂರಿ ನಮ್ರತೆಯಿಂದ ಎದ್ದು ನಿಂತರು. ಭಕ್ತಿಯಿಂದ ತಲೆಬಾಗಿ ಕೈ ಜೋಡಿಸಿದರು. "ತಮ್ಮ ಅಪೇಕ್ಷೆಯಂತೆ ನಾನು ತಿರುಪತಿಗೆ ಹೋಗಲು ಸಿದ್ಧನಿದ್ದೇನೆ. ಅಪ್ಪಣೆ ಕೊಡಿರಿ. ತಮ್ಮ ಆಶೀರ್ವಾದ ಬಲದಿಂದ ಯಶಸ್ವಿಯಾಗುತ್ತೇನೆ" ಎಂದು ವಿನಯದಿಂದ ನುಡಿದರು.

ರಾಮಾನುಜರಿಗೆ ಬಹಳ ಸಂತೋಷವಾಯಿತು. ಅನಂತಸೂರಿಯನ್ನು ಹತ್ತಿರ ಕರೆದು ಆತನ ತಲೆಯನ್ನು ಪ್ರೀತಿಯಿಂದ ನೇವರಿಸಿದರು. ವಾತ್ಸಲ್ಯದಿಂದ ಬೆನ್ನು ತಟ್ಟಿದರು. "ಅನಂತ, ನೀನೀಗ ನಿಜವಾದ ಗಂಡಸು. ತಿರುಪತಿಯ ಪರ್ವತದಲ್ಲಿರುವ ನಾನಾ ವಿಧವಾದ ಕಷ್ಟಗಳನ್ನು ಎದುರಿಸಿ ನೀನು ನಿಜವಾಗಿ ಯಶಸ್ಸುಗಳಿಸುತ್ತೀಯೆ, ಹೋಗಿ ಬಾ" ಎಂದು ಹೇಳಿದರು. ಶಿಷ್ಯನನ್ನು ಹೃತ್ಪೂರ್ವಕವಾಗಿ ಆಶೀರ್ವದಿಸಿ ಬೀಳ್ಕೊಟ್ಟರು.

ಅನಂತಸೂರಿ ತಮ್ಮ ಹೆಂಡತಿಯನ್ನು ಕರೆದುಕೊಂಡು ಶ್ರೀರಂಗದಿಂದ ಪ್ರಯಾಣ ಹೊರಟರು. ಹಲವಾರು ದಿನಗಳ ಕಾಲ ಪ್ರಯಾಣ ಮಾಡಿ ತಿರುಪತಿಗೆ ಬಂದು ಸೇರಿದರು.

ಆಗ (ಹನ್ನೊಂದನೆಯ ಶತಮಾನ) ತಿರುಪತಿಗೆ ಈಗಿನಂತೆ ರಸ್ತೆಗಳು ಇರಲಿಲ್ಲ. ಪ್ರಯಾಣ ತುಂಬಾ ಕಷ್ಟಕರವಾಗಿರುತ್ತಿತ್ತು. ಅಪಾಯಗಳಿಂದ ಕೂಡಿರುತ್ತಿತ್ತು. ಕಾಡುಮೇಡುಗಳಲ್ಲಿ ನಡೆದು, ಬೆಟ್ಟಗುಡ್ಡಗಳನ್ನು ಹತ್ತಿ ಇಳಿದು ಸಾಗಬೇಕಿತ್ತು. ಕಳ್ಳಕಾಕರ ಭಯವೂ ಕಾಡುಮೃಗಗಳ ಭೀತಿಯೂ ಇರುತ್ತಿತ್ತು. ತರುಣ ಅನಂತಸೂರಿಗೆ ಗುರುವಿನ ಆಶೀರ್ವಾದ ಧೈರ್ಯವನ್ನು ಕೊಟ್ಟಿತ್ತು. ಆತ ಉತ್ಸಾಹದಿಂದ ಎಲ್ಲ ಅಡ್ಡಿ ಆತಂಕಗಳನ್ನೆದುರಿಸುತ್ತಾ ಪ್ರಯಾಣಮಾಡಿದರು. ತಿರುಪತಿಯ ಬೆಟ್ಟವನ್ನು ಹತ್ತಿದರು. ಶ್ರೀ ವೆಂಕಟೇಶ್ವರನ ದರ್ಶನ ಮಾಡಿದರು. ತಿರುಪತಿಯಲ್ಲಿಯೇ ಇದ್ದ ರಾಮಾನುಜರ ಸೋದರಮಾವ ಶ್ರೀಶೈಲಪೂರ್ಣರನ್ನೂ ಕಂಡರು. ತಾವು ಅಲ್ಲಿಗೆ ಬಂದ ಉದ್ದೇಶವನ್ನೂ, ರಾಮಾನುಜರ ಅಪ್ಪಣೆಯನ್ನು ವಿವರಿಸಿದರು. ಶ್ರೀ ಶೈಲ ಪೂರ್ಣರ ಆಶೀರ್ವಾದವನ್ನು ಪಡೆದುಕೊಂಡರು.

ಅನಂತಸೂರಿಯು ಹೂದೋಟಕ್ಕಾಗಿ ಒಂದು ಸ್ಥಳವನ್ನು ಆರಿಸಿಕೊಂಡರು. ಅದರ ಬಳಿಯಲ್ಲಿಯೇ ವಾಸಕ್ಕಾಗಿ ಒಂದು ಗುಡಿಸಿಲನ್ನು ನಿರ್ಮಿಸಿಕೊಂಡರು. ಅವರೂ, ಅವರ ಹೆಂಡತಿಯೂ ಹಾರೆ, ಗುದ್ದಲಿ, ಪಿಕಾಸಿಗಳನ್ನು ಹಿಡಿದು ರೈತ ಮಕ್ಕಳಂತೆ ನೆಲವನ್ನು ಅಗೆದರು. ಕಲ್ಲುಗಳನ್ನು ರಾಶಿ ಮಾಡಿದರು. ಮುಳ್ಳಿನ ಗಿಡಗಳನ್ನು ಕಿತ್ತೆಸೆದರು. ಸುತ್ತಲೂ ಬೇಲಿಯನ್ನು ನಿರ್ಮಿಸಿದರು. ಪಾತಿಗಳನ್ನು ಮಾಡಿ ಹೂಗಿಡಗಳನ್ನು ನೆಟ್ಟರು. ನೀರಿಗಾಗಿ ಬಾವಿಯನ್ನೂ ತೋಡಿದರು. ಹೂವಿನ ತೋಟಕ್ಕೆ ತಮ್ಮ ಗುರುಗಳ ಹೆಸರನ್ನು ಇಟ್ಟರು. ಅದು ರಾಮಾನುಜವನ ಎಂದಾಯಿತು. ಈ ಗಂಡಹೆಂಡತಿ ಹೂತೋಟಕ್ಕಾಗಿ ಹಗಲಿರುಳೂ ಶ್ರಮಿಸಿದರು. ಹಲವಾರು ತಿಂಗಳುಗಳ ಪರಿಶ್ರಮದಿಂದ ಹೂವಿನ ಗಿಡಗಳು ಚೆನ್ನಾಗಿ ಬೆಳೆದವು. ನಾನಾ ವಿಧವಾದ ಹೂಗಳು ಅರಳಿದವು. ಅನಂತ ಸೂರಿ ತುಂಬಾ ಸಂತುಷ್ಟರಾದರು. ಹೂಗಳನ್ನು ಮೃದುವಾಗಿ ಬಿಡಿಸಿ ಬುಟ್ಟಿಯಲ್ಲಿ ತುಂಬಿಕೊಂಡರು. ಬಾಳೆಯ ನಾರಿನಲ್ಲಿ ತಾವೇ ಹೂಮಾಲೆಗಳನ್ನು ಹೆಣೆದರು. ಭಕ್ತಿಯಿಂದ ಪುಷ್ಪಮಾಲೆಗಳನ್ನು ವೆಂಕಟೇಶ್ವರನಿಗೆ ಅರ್ಪಿಸಿದರು. ಹೀಗೆಯೇ ಸಾಗಿತು ಅವರ ಕಾಯಕ.

ಹೆಚ್ಚು ಹೆಚ್ಚು ಹೂವಿನ ಗಿಡಗಳನ್ನು ಬೆಳೆಸುವ ಯೋಚನೆ ಬಂತು ಅನಂತಸೂರಿಗೆ. ಹೆಚ್ಚು ಸ್ಥಳವನ್ನು ಅಗತೆ ಮಾಡಿದರು. ದೊಡ್ಡ ಬೇಲಿಯನ್ನು ನಿರ್ಮಿಸಿದರು. ದೊಡ್ಡದಾಗುತ್ತಿದ್ದ ಹೂದೋಟಕ್ಕೆ ಬಾವಿಯ ನೀರು ಸಾಕಾಗುತ್ತಿರಲಿಲ್ಲ. ಒಂದು ಕೊಳವನ್ನು ತೋಡಲು ನಿರ್ಧರಿಸಿದರು. ಕೊಳಕ್ಕಾಗಿ ನೆಲವನ್ನು ತೋಡಲು ಆರಂಭಿಸಿದರು. ಅವರು ಹಾರೆಯಿಂದ ನೆಲವನ್ನು ಅಗೆದು ಮಣ್ಣನ್ನು ಮಕ್ಕರಿಗೆ ತುಂಬಿ ಕೊಡುತ್ತಿದ್ದರು. ಅವರ ಪತ್ನಿ ಮಕ್ಕರಿಯನ್ನು ಎತ್ತಿಕೊಂಡು ಮಣ್ಣನ್ನು ದೂರದಲ್ಲಿ ರಾಶಿಮಾಡುತ್ತಿದ್ದರು.

ಈ ಗಂಡಹೆಂಡತಿ ಎಡೆಬಿಡದೆ ಕೆಲಸ ಮಾಡುತ್ತಿದ್ದುದನ್ನು ಒಬ್ಬ ತರುಣ ಬ್ರಹ್ಮಚಾರಿ ನೋಡಿದ. ಆತನು ಸೂರಿಯ ಹತ್ತಿರ ಬಂದು ವಿನಯದಿಂದ ಕೇಳಿದ, "ಸ್ವಾಮಿ, ತಾವು ಏನನ್ನು ಮಾಡುತ್ತಿದ್ದೀರಿ ? ನೆಲವನ್ನೇಕೆ ಅಗೆಯುತ್ತಿದ್ದೀರಿ ?"

"ತೋಟಕ್ಕೆ ನೀರು ಸಾಕಾಗುತ್ತಿಲ್ಲ, ಆದ್ದರಿಂದ ಒಂದು ಕೊಳವನ್ನು ನಿರ್ಮಿಸುತ್ತಿದ್ದೇನೆ" ಎಂದರು ಅನಂತಸೂರಿ.

"ಸ್ವಾಮಿ, ತಾವೊಬ್ಬರೇ ಈ ಕೆಲಸವನ್ನು ಮಾಡಿ ಬೇಗ ಮುಗಿಸುವುದು ಸಾಧ್ಯವೆ ? ಹಲವಾರು ಜನಗಳ ಸಹಾಯ ತೆಗೆದುಕೊಳ್ಳಬಾರದೆ ?"

"ನಾನೊಬ್ಬನೇ ಮಾಡುತ್ತಿಲ್ಲ. ನನ್ನ ಪತ್ನಿಯೂ ನನ್ನೊಡನೆ ಕೆಲಸ ಮಾಡುತ್ತಿದ್ದಾಳೆ."

"ನಾನೂ ತಮ್ಮೊಡನೆ ಸೇರಿಕೊಂಡು ಕೆಲಸ ಮಾಡುತ್ತೇನೆ. ಅಪ್ಪಣೆ ಕೊಡಿ."

"ಬೇಡ ಬೇಡ. ಇದು ನನಗೆ ಪ್ರಿಯವಾದ ಕೆಲಸ. ಎಷ್ಟು ಕಷ್ಟವಾದರೂ ನಾನೇ ಮಾಡಿದರೆ ನನಗೆ ತೃಪ್ತಿ ಸಂತೋಷ ದೊರಕುತ್ತದೆ."

"ಸ್ವಾಮಿ, ನನ್ನನ್ನೂ ಕೆಲಸಕ್ಕೆ ಸೇರಿಸಿಕೊಳ್ಳಿ. ನನಗೂ ಸ್ವಲ್ಪ ಪುಣ್ಯ ಬರಲಿ."

"ಬೇಡ ಹೋಗಯ್ಯ. ಮಾತನಾಡುತ್ತ ನನ್ನ ಕೆಲಸಕ್ಕೆ ಅಡ್ಡಿಮಾಡಬೇಡ. ನನ್ನ ಕಾಲವನ್ನು ವ್ಯರ್ಥಮಾಡಬೇಡ" ಎಂದು ಅನಂತಸೂರಿ ಅವನನ್ನು ಗದರಿಸಿದರು. ಆತ ಹೊರಟುಹೋದ. ಅವರು ಮತ್ತೆ ನೆಲವನ್ನು ಅಗೆದು ಮಕ್ಕರಿಗೆ ಮಣ್ಣನ್ನು ತುಂಬಿಕೊಡುತ್ತಿದ್ದರು. ಅವರ ಹೆಂಡತಿ ಅದನ್ನು ಹೊತ್ತು ಸಾಗಿಸುತ್ತಿದ್ದರು.

ಸ್ವಲ್ಪ ಹೊತ್ತಾದ ಮೇಲೆ ಅನಂತಸೂರಿಯ ಹೆಂಡತಿ ಬೇಗ ಬೇಗ ಬಂದು ಮಕ್ಕರಿಯನ್ನು ಎತ್ತಿ ಸಾಗಿಸುತ್ತಿದ್ದರು. ಸೂರಿ ನೆಲವನ್ನು ತೋಡಿ ಮಕ್ಕರಿಗೆ ಮಣ್ಣನ್ನು ತುಂಬುವಷ್ಟರಲ್ಲಿಯೇ ಆಕೆ ಬರಿದಾದ ಮಕ್ಕರಿಯನ್ನು ಹೊತ್ತು ತರುತ್ತಿದ್ದರು. ಸೂರಿಗೆ ಆಶ್ಚರ್ಯವಾಯಿತು. "ಇದೇನು ?ನೀನು ಇಷ್ಟೊಂದು ಬೇಗ ಬೇಗ ಕೆಲಸ ಮಾಡುತಿದ್ದೀಯಲ್ಲ ?, ಎಂದು ಕೇಳಿದರು. ಆಗ ಆಕೆ "ನಿಮ್ಮೊಡನೆ ಮಾತನಾಡುತ್ತಿದ್ದ ಹುಡುಗ ನನಗೆ ಸಹಾಯ ಮಾಡುತ್ತಿದ್ದಾನೆ. ನಾನು ಅರ್ಧದೂರ ಮಕ್ಕರಿಯನ್ನು ಹೊತ್ತು ಹೋಗುತ್ತಿದ್ದೇನೆ. ಆತ ಅದನ್ನು ಒಯ್ದು ಮುಂದಕ್ಕೆ ಸಾಗಿಸುತ್ತಾನೆ' ಎಂದರು. ಅನಂತ ಸೂರಿಗೆ ಆ ಹುಡುಗನ ಮೇಲೆ ಕೋಪ ಬಂದಿತು. ಕೊಳದ ಕೆಲಸವನ್ನು ತಾವೇ ಪೂರ್ತಿಮಾಡಬೇಕೆಂದು ಅವರ ಇಷ್ಟವಾಗಿತ್ತು. ತಮ್ಮ ಕೆಲಸದಲ್ಲಿ ಇವನಾರೊ ಹುಡುಗ ಕೈಹಾಕುತ್ತಿದ್ದಾನೆ ಎಂದು ಅವರಿಗೆ ಕೋಪ ಬಂದಿತು. ಅವನು ಸೂರಿಯ ಕೋಪದ ಮುಖವನ್ನು ನೋಡಿ ಓಡಲಾರಂಭಿಸಿದ. ಇವರು ಕೋಪದಿಂದ ಹಾರೆಯನ್ನು ಅವನತ್ತ ಬಿಸಾಡಿದರು. ಅದು ಅವನ ಮೃದುವಾದ ಗದ್ದಕ್ಕೆ ತಾಗಿ ಬಿದ್ದಿತು. ಹುಡುಗ ಓಡಿಹೋಗಿ ದೇವಸ್ಥಾನವನ್ನು ಹೊಕ್ಕನು. ದಾರಿಯುದ್ದಕ್ಕೂ ಅವನ ಗಲ್ಲದಿಂದ ರಕ್ತ ತೊಟ್ಟಿಕ್ಕಿತ್ತು.

ಅನಂತಸೂರಿ ಬಿಡಲಿಲ್ಲ. ದೇವಸ್ಥಾನಕ್ಕೂ ಅವನನ್ನು ಅಟ್ಟಿಸಿಕೊಂಡು ಹೋದರು. ಅವನು ಅಲ್ಲೆಲ್ಲೂ ಕಾಣಲಿಲ್ಲ. ಅಷ್ಟು ಹೊತ್ತಿಗೆ ಸಂಜೆಯ ಪೂಜೆಗಾಗಿ ಅರ್ಚಕರು ಬಂದರು. ಅನಂತಸೂರಿಯನ್ನು ನೋಡಿ "ಏನಿದು ನಿಮ್ಮ ವೇಷ ? ಹಾರೆಯನ್ನೇಕೆ ಹಿಡಿದು ನಿಂತಿದ್ದೀರಿ?" ಎಂದು ಕೇಳಿದರು. ಸೂರಿ ಎಲ್ಲವನ್ನೂ ಹೇಳಿ "ಆ ಹುಡುಗ ದೇವಸ್ಥಾನದೊಳಕ್ಕೆ ಓಡಿಹೋದ, ಒಳಗೆ ಎಲ್ಲಿಯೋ ಅವಿತು ಕೊಂಡಿರಬೇಕು. ಅವನಿಗೆ ಬುದ್ಧಿ ಕಲಿಸಲು ಕಾದಿದ್ದೇನೆ "ಎಂದರು. ಅರ್ಚಕರು ನಕ್ಕುಬಿಟ್ಟು ಒಳಕ್ಕೆ ಹೋದರು.

ಅರ್ಚಕರು ಗರ್ಭಗುಡಿಯ ಬಾಗಿಲು ತೆರೆದು ದೀಪವನ್ನು ಹಚ್ಚಿದರು. ದೇವರ ವಿಗ್ರಹವನ್ನು ನೋಡಿದರು. ಗಲ್ಲದಿಂದ ರಕ್ತ ತೊಟ್ಟಿಕ್ಕುತ್ತಿತ್ತು. ಅವರ ಹಿಂದೆಯೇ ಬಂದ ಸೂರಿಯೂ ಇದನ್ನು ನೋಡಿದರು. ಅವರು ವಿಸ್ಮಯ ಪಶ್ಚಾತ್ತಾಪಗಳಿಂದ ಕರಗಿಹೋದರು. "ಎಂಥಾ ಕೆಲಸ ಮಾಡಿದಿರಿ ಸೂರಿ? ವೆಂಕಟೇಶ್ವರನೆ ನಿಮಗೆ ಆ ತರುಣನ ರೂಪದಲ್ಲಿ ದರ್ಶನಕೊಟ್ಟ, ನೀವು ಆತನನ್ನೆ ಹೊಡೆದುಬಿಟ್ಟಿರಲ್ಲ"—ಎಂದರು ಅರ್ಚಕರು. ಅನಂತ ಸೂರಿಗೆ ತುಂಬಾ ದುಃಖವಾಯಿತು. ಅವರು ತಮ್ಮ ಮುಂಗೋಪಕ್ಕೆ ತಮ್ಮನ್ನು ತಾವೇ ನಿಂದಿಸಿಕೊಂಡರು. "ವೆಂಕಟೇಶ್ವರ ನನ್ನಲ್ಲಿ ನಿನಗೆ ಎಷ್ಟೊಂದು ಮರುಕವಪ್ಪ! ಮೂಢನಾದ ನಾನು ತಿಳಿಯದೇ ಹೊಡೆದು ಬಿಟ್ಟೆನಲ್ಲ! ನಾನೆಂತಹ ಪಾಪಿ!" ಎಂದು ದೇವರ ಮುಂದೆ ಗೋಳಾಡಿದರು. ಪಚ್ಚಕರ್ಪೂರವನ್ನು ತಂದು ದೇವರ ಗದ್ದಕ್ಕೆ ಮೆತ್ತಿದರು. ರಕ್ತಸ್ರಾವ ನಿಂತಿತು. ದೇವರ ಮುಖದಲ್ಲಿ ಮಂದಹಾಸ ಮಿನುಗಿತು.

ಅನಂತಸೂರಿ ಇನ್ನು ಮೇಲೆ ಎಚ್ಚರವಾಗಿರಬೇಕು ಎಂದು ನಿಶ್ಚಯಿಸಿದರು. ಕೊಳದ ಕೆಲಸವನ್ನು ಕಷ್ಟಪಟ್ಟು ಮಾಡಿ ಮುಗಿಸಿದರು. ಕೊಳದಲ್ಲಿ ನೀರೂ ಬಂದಿತು. ಅವರ ಶ್ರಮಸಾರ್ಥಕವಾಯಿತು.

ಒಂದುದಿನ ಬೆಳಿಗ್ಗೆ ಸೂರಿ ತೋಟಕ್ಕೆ ಬಂದರು. ಯಾರೋ ಹೂವಿನ ಪಾತಿಗಳನ್ನು ತುಳಿದುಹಾಕಿದ್ದುದು ಅವರ ದೃಷ್ಟಿಗೆ ಬಿದ್ದಿತು. ಸಣ್ಣ ಪುಟ್ಟ ಹೂಗಿಡಗಳನ್ನು ತುಳಿದುಬಿಟ್ಟಿದ್ದರು. ಸೂರಿಗೆ ಆಶ್ಚರ್ಯವಾಯಿತು. "ನಿನ್ನೆ ಸಂಜೆ ಚೆನ್ನಾಗಿತ್ತು ಬೆಳಿಗ್ಗೆಯ ಹೊತ್ತಿಗೆ ಹೀಗೇಕೆ ಹಾಳಾಯಿತು?" ಎಂದು ತಮ್ಮಷ್ಟಕ್ಕೆ ತಾವೇ ಕೇಳಿಕೊಂಡರು. ಕುಕ್ಕರಗಾಲಿನಲ್ಲಿ ಕುಳಿತು ಗಿಡಗಳನ್ನು ನೆಟ್ಟಗೆ ಮಾಡಿದರು. ಮಾಲೆಗಳನ್ನು ಕಟ್ಟಿ ದೇವಸ್ಥಾನಕ್ಕೆ ತೆಗೆದು ಕೊಂಡುಹೋದರು. ಮಾರನೆಯ ದಿನ ಬೆಳಿಗ್ಗೆ ಅವರು ತೋಟಕ್ಕೆ ಬಂದಾಗ ಹಿಂದಿನ ದಿನದಂತೆಯೇ ತೋಟ ಹಾಳಾಗಿತ್ತು. ಯಾರೋ ಪಾತಿಗಳನ್ನು ತುಳಿದು ತೋಟದ ಅಂದವನ್ನು ಕೆಡಿಸಿದ್ದರು. ಅನಂತಸೂರಿಗೆ ಕೋಪವೂ, ದುಃಖವೂ ಆದವು. ದೇವರ ಪೂಜೆಗಾಗಿ ಬೆಳೆಸಿರುವ ಹೂಗಿಡಗಳನ್ನು ಯಾರೋ ತುಂಟರು ಹಾಳುಮಾಡುತ್ತಿದ್ದಾರಲ್ಲ ಎಂದು ಕೋಪವುಂಟಾಯಿತು. ಎಷ್ಟೋ ಹೂಗಳು ಕಾಲ್ತುಳಿತಕ್ಕೆ ಸಿಕ್ಕಿ ಹಾಳಾದುವಲ್ಲ ಎಂದು ದುಃಖವಾಯಿತು. ಅಂದಿನರಾತ್ರಿ ತಾವೇ ತೋಟದಲ್ಲಿ ಕಾವಲು ನಿಂತರು.

ಅದು ವಸಂತಕಾಲ. ಹುಣ್ಣಿಮೆಯ ಬೆಳದಿಂಗಳು ಹರಡಿತ್ತು. ತಂಪಾಗಿ ಗಾಳಿ ಬೀಸುತ್ತಿತ್ತು. ಮಲ್ಲಿಗೆಯ ಬಳ್ಳಿಯಿಂದ ನರುಗಂಪು ಸುತ್ತಲೂ ಹರಡುತ್ತಿತ್ತು. ಮಲ್ಲಿಗೆಯ ಬಳ್ಳಿಯ ಮರೆಯಲ್ಲಿ ಅನಂತಸೂರಿ ಅಡಗಿ ಕುಳಿತರು. ದೂರದಲ್ಲಿ ಯಾರೋ ಇಬ್ಬರು ಬಂದುದು ಕಂಡಿತು. ಕೈ ಕೈ ಹಿಡಿದು ಬರುತ್ತಿದ್ದರು. ಬಂದವರು ಗಂಡ ಹೆಂಡತಿ ಇರಬೇಕು. ಅವರು ತೋಟದೊಳಕ್ಕೆ ನಿರ್ಭಯದಿಂದ ನುಗ್ಗಿದರು. ಲಲ್ಲೆಹೊಡೆಯುತ್ತ ಕಿಲಕಿಲ ನಗುತ್ತ ಅಲ್ಲೆಲ್ಲಾ ಓಡಾಡಿದರು. ಅನಂತ ಸೂರಿ ನೋಡುತ್ತಿದ್ದಂತೆಯೇ ಅವರು ಹಲವಾರು ಗಿಡಗಳನ್ನು ತುಳಿದುಕೊಂಡೇ ಅಲ್ಲೆಲ್ಲಾ ಜಿಗಿದಾಡುತ್ತಿದ್ದರು. ಅನಂತಸೂರಿಗೆ ಕೋಪ ತಡೆಯಲಾಗಲಿಲ್ಲ "ಯಾರು ನೀವು? ಅಲ್ಲೆ ನಿಲ್ಲಿ" ಎಂದೊಮ್ಮೆ ಗರ್ಜಿಸಿದರು. ಎದ್ದು ಅವರತ್ತ ಓಡಿದರು. ಇವರ ಧ್ವನಿ ಕೇಳಿಯೊಡನೆಯೇ ಆ ತರುಣ ದಂಪತಿಗಳು ತೋಟದಿಂದ ಓಡಲು ತೊಡಗಿದರು. ಅನಂತ ಸೂರಿ ಬಿಡಲಿಲ್ಲ. ಅವರನ್ನು ಓಡಿಸಿಕೊಂಡು ಹೋದರು. ಆತ ಸಿಕ್ಕಿಕೊಂಡವನು ಕೈ ಕೊಸರಿಕೊಂಡು ಓಡಿಬಿಟ್ಟ. ಆ ತರುಣಿ ತಪ್ಪಿಸಿಕೊಳ್ಳಲಾಗದೇ ಸಿಕ್ಕಿಹಾಕಿಕೊಂಡಳು. ಸೂರಿ ಆಕೆಯನ್ನು ಹಿಡಿದು ಹತ್ತಿರದಲ್ಲೇ ಇದ್ದ ಸಂಪಿಗೆ ಮರಕ್ಕೆ ಕಟ್ಟಿ ಹಾಕಿದರು.

ಆಕೆ ಅವರನ್ನು ಗೋಗರೆದಳು, "ಇನ್ನೊಂದು ಸಲ ನಿಮ್ಮ ತೋಟಕ್ಕೆ ಬರುವುದಿಲ್ಲ ಬಿಟ್ಟುಬಿಡಿ ಸ್ವಾಮಿ" ಎಂದು ಅಂಗಲಾಚಿದಳು: ಸೂರಿ "ಆಗದು ನಿನ್ನನ್ನು ಬಿಡುವುದಿಲ್ಲ" ಎಂದರು.

"ನೀವು ನನ್ನ ತಂದೆಯಿದ್ದಂತೆ. ನನ್ನನ್ನು ನಿಮ್ಮ ಮಗಳೆಂದು ತಿಳಿಯಿರಿ ನನ್ನನ್ನು ಬಿಟ್ಟುಬಿಡಿ" ಎಂದಾಕೆ ನುಡಿದಳು.

"ನಿನ್ನನ್ನು ಬಿಡುವುದಿಲ್ಲ; ನಿನ್ನ ಗಂಡನ ಹೆಸರೇನು? ನೀವು ಯಾರು? ನೀವುಎಲ್ಲಿದ್ದೀರಿ? ಎಲ್ಲವನ್ನೂ ವಿವರವಾಗಿ ತಿಳಿಸು" ಎಂದರು ಅನಂತ ಸೂರಿ.

"ತಂದೆಯೇ, ಪತಿವ್ರತೆಯರು ಎಂದಾದರೂ ಅವರ ಗಂಡನ ಹೆಸರನ್ನು ಹೇಳುತ್ತಾರೆಯೆ? ನಮ್ಮ ಯಜಮಾನರು ಇಲ್ಲಿಯ ರಾಜರು, ನಾವು ಇಲ್ಲಿಯೇ ವಾಸಿಸುತ್ತೇವೆ" ಎಂದು ಆಕೆ ಹೇಳಿದಳು. "ನಮ್ಮ ತೋಟಕ್ಕೇಕೆ ಬಂದಿರಿ? ಗಿಡಗಳನ್ನು ತುಳಿದುಹಾಳು ಮಾಡಿದ್ದೇಕೆ?—ಅನಂತಸೂರಿ ಕೇಳಿದರು.

"ಪತಿ ನನ್ನನ್ನು ಕರೆದೆಡೆಗೆ ಹೋಗಬೇಕಾದುದು ನನ್ನ ಕರ್ತವ್ಯವಲ್ಲವೆ? ಆತನ ತಪ್ಪಿಗೆ ನನ್ನನ್ನು ಹಿಡಿದು ಕಟ್ಟಿಹಾಕಬಹುದೆ? ಆತನ ಇಚ್ಛೆಗೆ ವಿರುದ್ಧವಾಗಿ ನಾನು ಹೇಗೆ ನಡೆದುಕೊಳ್ಳಲಿ? ದಯವಿಟ್ಟು ಬಿಟ್ಟುಬಿಡಿ" ಎಂದು ಆಕೆ ಗೋಗರೆದುಕೊಂಡಳು.

ಅನಂತಸೂರಿ ಬಿಡಲಿಲ್ಲ. "ನಿನ್ನನ್ನು ಕರೆದುಕೊಂಡು ಹೋಗಲು ನಿನ್ನ ಗಂಡನು ಹೇಗಿದ್ದರೂ ಬಂದೇ ಬರುತ್ತಾನೆ ಅಲ್ಲಿಯವರೆಗೆ ನೀನು ಇಲ್ಲಿಯೇ ಇರಬೇಕು" ಎಂದರು.

ಬೆಳಗಾಯಿತು. ಅರ್ಚಕರು ಪೂಜೆಗಾಗಿ ದೇವಸ್ಥಾನಕ್ಕೆ ಬಂದರು. ಗರ್ಭಗುಡಿಯ ಬಾಗಿಲನ್ನು ತೆರೆದರು. ವೆಂಕಟೇಶ್ವರನ ವಕ್ಷಸ್ಥಳದಲ್ಲಿ ಇದ್ದ ಲಕ್ಷ್ಮಿಯ ಮೂರ್ತಿ ಅವರಿಗೆ ಕಾಣಲಿಲ್ಲ. ಅವರು ಆಶ್ಚರ್ಯದಿಂದ ಹುಡುಕಾಡಿದರು. ದೇವಿಯ ಮೂರ್ತಿ ಎಲ್ಲೂ ಕಾಣಲಿಲ್ಲ. ಕೂಡಲೇ ದೇವಸ್ಥಾನದ ಅಧಿಕಾರಿಗಳಿಗೆ ವರದಿ ಮಾಡಿದರು. ಎಲ್ಲರೂ ಸೇರಿ ಯೋಚಿಸುತ್ತಾ ಚರ್ಚಿಸುತ್ತಾ ಇದ್ದರು. ಆಗ ಅಶರೀರವಾಣಿ ಕೇಳಿಸಿತು. "ಅನಂತ ಸೂರಿಯವರನ್ನೂ, ಅವರು ಕಟ್ಟಿಹಾಕಿರುವ ಸ್ತ್ರೀಯನ್ನು ಕರೆದುಕೊಂಡು ಬನ್ನಿ. ಆಕೆ ಲಕ್ಷ್ಮಿಯಲ್ಲದೆ ಬೇರಾರೂ ಅಲ್ಲ."

ಒಡನೆಯೇ ಎಲ್ಲರೂ ಸೂರಿಯ ತೋಟಕ್ಕೆ ಓಡಿದರು. ಅಲ್ಲಿ ಸಂಪಿಗೆ ಮರಕ್ಕೆ ಕಟ್ಟಿಹಾಕಿದ್ದ ತರುಣಿಯನ್ನೂ, ಆಕೆಯನ್ನು ಕಾಯುತ್ತಾ ಕುಳಿತಿದ್ದ ಸೂರಿಯವರನ್ನೂ ನೋಡಿದರು. ಸೂರಿಗೆ ಅಶರೀರವಾಣಿಯನ್ನು ತಿಳಿಸಿದರು. ಸೂರಿಗೆ ಭಯ ಆಶ್ಚರ್ಯಗಳುಂಟಾದವು. "ಹಾಗಾದರೆ ನನ್ನ ತೋಟಕ್ಕೆ ವಿಹರಿಸಲೆಂದು ಬಂದವರು ಪದ್ಮಾವತಿ ವೆಂಕಟೇಶ್ವರರೇ! ಅಯ್ಯೋ! ನಾನೆಂತಹ ದೊಡ್ಡ ತಪ್ಪುಮಾಡಿಬಿಟ್ಟೆ. ವೆಂಕಟೇಶ್ವರಾ, ನೀನೆಂದು

ಒಂದು ಸಲ ಹಲವಾರು ಜನ ಬಾಲಕರು ಸೂರಿಯವರನ್ನು ಕಂಡು ತಮಗೆ ಏನಾದರೂ ಉಪದೇಶ ಕೊಡಬೇಕೆಂದು ಬೇಡಿಕೊಂಡರು. "ನೀವು ಕೆಟ್ಟವರ ಸಹವಾಸ ಮಾಡಬೇಡಿರಿ. ಒಳ್ಳೆಯವರ ಜೊತೆ ಸೇರಿರಿ. ಸತ್ಯವನ್ನು ಪಾಲಿಸಿ. ನಿಮ್ಮ ಕೈಲಾದಷ್ಟು ಪರೋಪಕಾರ ಮಾಡಿರಿ. ನಿಮ್ಮಿಂದ ಆದಷ್ಟು ದಾನವನ್ನು ಮಾಡಿರಿ. ಯಾರಿಗೂ ಹಿಂಸೆ ಮಾಡಬೇಡಿ. ಒಳ್ಳೆಯ ಕೆಲಸಗಳನ್ನು ಹುಡುಕಿಕೊಂಡು ಮಾಡಿರಿ. ಸದಾ ದೇವರ ಭಜನೆಯನ್ನೂ ಧ್ಯಾನವನ್ನೂ ಮಾಡಿ." ಎಂದು ಸರಳವಾಗಿ ಅನಂತಸೂರಿ ಉಪದೇಶ ಮಾಡಿದರು.

ತಿಳಿಯದೆ ಗದರಿಸಿಕೊಂಡು ಬಿಟ್ಟೆನಲ್ಲ. ನನ್ನನ್ನು ಅನುಗ್ರಹಿಸಲು ನೀನು ಎರಡನೆಯ ಸಲ ಬಂದಾಗಲೂ ನಾನು ತಿಳಿಯದೇ ಹೋದೆನಲ್ಲ. ನಾನೆಂತಹ ದಡ್ಡ!'' ಎಂದು ಪಶ್ಚಾತ್ತಾಪದಿಂದ ಅನಂತಸೂರಿ ಮರುಗಿದರು. ಅವರ ಕಣ್ಣುಗಳಿಂದ ಕಂಬನಿ ಸುರಿಯುತ್ತಿತ್ತು. ಅನಂತಸೂರಿ ದೇವಸ್ಥಾನಕ್ಕೆ ಬಂದರು. ಸಂಪಿಗೆ ಮರಕ್ಕೆ ಕಟ್ಟಲ್ಪಟ್ಟಿದ್ದ ತರುಣಿಯು ಆಗಲೇ ಅಂತರ್ಧಾನವಾಗಿ ಬಿಟ್ಟಿದ್ದಳು. ವೆಂಕಟೇಶ್ವರನ ಎದೆಯ ಎಡಭಾಗದಲ್ಲಿ ಲಕ್ಷ್ಮಿಯ ಮೂರ್ತಿ ಮತ್ತೆ ಗೋಚರಿಸಿತು. ಅಂದಿನಿಂದ ಅನಂತಸೂರಿಗೆ "ವೆಂಕಟೇಶ್ವರನ ಮಾವ'' ಎಂಬ ಹೆಸರು ಬಂತು.

ಅನಂತಸೂರಿ ತೋಟದಲ್ಲಿ ಒಂದುದಿನ ಕಳೆ ಕೀಳುತ್ತಿದ್ದರು. ಹೂಗಿಡಗಳ ಕೆಳಗೆ ಮತ್ತು ಪಾತಿಗಳಲ್ಲಿ ಬೆಳೆದಿದ್ದ ಹುಲ್ಲನ್ನು, ಮುಳ್ಳಿನ ಬಳ್ಳಿಗಳನ್ನು ಕಿತ್ತು ಬಿಸಾಡುತ್ತಿದ್ದರು. ಪಾತಿಗಳಲ್ಲಿದ್ದ ಸಣ್ಣ ಪುಟ್ಟ ಕಲ್ಲುಗಳನ್ನು ತೆಗೆದು ಹಾಕುತ್ತಿದ್ದರು. ನಿತ್ಯವೂ ಇನ್ನೂ ನಸುಕು ಇರುವಾಗಲೇ ಅವರು ತೋಟಕ್ಕೆ ಬರುತ್ತಿದ್ದರು. ಗಿಡಗಳಿಗೆ ನೀರು ಹಾಯಿಸುತ್ತಿದ್ದರು. ಅನಂತರ ಹೂಗಳನ್ನು ಬಿಡಿಸುತ್ತಿದ್ದರು. ಆದಿನ ಬೆಳಿಗ್ಗೆ ಅವರು ಬಂದಾಗ ಗಿಡಗಳ ಕೆಳಗೆಲ್ಲ ತುಂಬಾ ಕಳೆ ಬೆಳೆದಿದ್ದನ್ನು ನೋಡಿದರು. ಮೊದಲು ಅದನ್ನು ಕಿತ್ತೆಸೆದು ಅನಂತರ ಮುಂದಿನ ಕೆಲಸ ಎಂದುಕೊಂಡರು.

ಒಂದು ಗಿಡ ಪೊದೆಯಂತೆ ಬೆಳೆದಿತ್ತು. ಅದರ ಅಡಿಯಲ್ಲಿ ಕಳೆಯನ್ನು ಕೀಳಲೆಂದು ಸೂರಿ ಕೈ ಹಾಕಿದರು. ನಾಗರ ಹಾವೊಂದು ಗಿಡದ ಕೆಳಗಿಂದ ಭುಸ್ಸೆಂದು ತಲೆಯೆತ್ತಿತು, ಸೂರಿಯ ಮುಂಗೈಯನ್ನು ಬಲವಾಗಿ ಕಚ್ಚಿತು. ಸೂರಿಯೊಡನೆ ಕೆಲಸ ಮಾಡುತ್ತಿದ್ದ ಹಲವರು ವಿದ್ಯಾರ್ಥಿಗಳು ಹಾವನ್ನು ಹೊಡೆಯಲೆಂದು ಮುಂದೆ ಬಂದರು. ಸೂರಿ ಬೇಡವೆಂದು ತಡೆದರು. ಹಾವು ಹೊರಟು ಹೋಯಿತು. ವಿದ್ಯಾರ್ಥಿಗಳು ಗಾಭರಿಯಾದರು. ದೇವಸ್ಥಾನಕ್ಕೆ ಓಡಿಹೋದರು. ಸೂರಿಗೆ ಹಾವು ಕಚ್ಚಿದ ವಾರ್ತೆಯನ್ನು ಅಲ್ಲಿದ್ದವರಿಗೆಲ್ಲ ತಿಳಿಸಿದರು. ಸೂರಿ ಮಾತ್ರ ಸ್ವಲ್ಪವೂ ಭಯಪಡಲಿಲ್ಲ. ತಮ್ಮಷ್ಟಕ್ಕೆ ತಾವು ಕೆಲಸ ಮಾಡುತ್ತಲೇ ಇದ್ದರು. ಅರ್ಚಕರು ಓಡಿ ಬಂದರು. "ಸೂರಿ, ಏಕೆ ಸುಮ್ಮನಿದ್ದೀರಿ? ಏಳಿ ನಡೆಯಿರಿ. ವೈದ್ಯರ ಹತ್ತಿರಕ್ಕೆ ಹೋಗಿ ಔಷಧಿ ಹಾಕಿಸೋಣ'' ಎಂದರು.

ಅನಂತಸೂರಿ ಕೇಳಿದರು. "ನನ್ನಲ್ಲಿರುವ ಅಹಂಕಾರವೆಂಬ ಹಾವಿನ ವಿಷಕ್ಕೆ ಪರಿಹಾರ ಮಾಡುತ್ತೀರೊ? ಅಥವಾ ನನ್ನ ಕೈಯನ್ನು ಕಚ್ಚಿದ ಹಾವಿನ ವಿಷಕ್ಕೆ ಪರಿಹಾರವನ್ನು ಮಾಡುತ್ತೀರೊ? ಯಾವುದಕ್ಕೆ ಚಿಕಿತ್ಸೆ ಮಾಡುತ್ತೀರಿ?

"ನನ್ನ ಆತ್ಮನಾಶಕ್ಕೆ ಕಾರಣವಾಗಿರುವ ಅಹಂಕಾರವೆಂಬ ಸರ್ಪದ ವಿಷಕ್ಕೆ ಔಷಧಿ ಕೊಡುವವರು ಈ ಪ್ರಪಂಚದಲ್ಲಿ ಯಾರೂ ಇಲ್ಲ. ವೆಂಕಟೇಶ್ವರನೊಬ್ಬನೇ ಅದಕ್ಕೆ ಔಷಧಿಕೊಡುವ ವೈದ್ಯ.

"ಈ ಕೈಯನ್ನು ಕಚ್ಚಿದ ಹಾವಿನ ವಿಷಕ್ಕೆ ಚಿಕಿತ್ಸೆ ಮಾಡಿಸಿಕೊಳ್ಳಬೇಕೆಂದು ನೀವು ಹೇಳುತ್ತಿದ್ದೀರಿ. ಈ ಶರೀರ ಎಂದಿಗಾದರೂ ಸಾಯಲೇಬೇಕು. ಸಾಯಲಿಬಿಡಿ. ಇದಕ್ಕೇಕೆ ಔಷಧಿ?'' ಎಂದರು ಅನಂತಸೂರಿ.

ಅವರ ಮಾತು ಕೇಳಿ ಬಂದದವರಿಗೆ ಬಹಳ ಆಶ್ಚರ್ಯವಾಯಿತು. "ಅನಂತಸೂರಿ ನಿಮ್ಮ ಮಾತೇ ನಮಗೆ ಅರ್ಥವಾಗುತ್ತಿಲ್ಲ. ವಿಷವೇರಿ ನಿಮಗೆ ಮರಣವುಂಟಾದರೆ ವೆಂಕಟೇಶ್ವರನ ಸೇವೆ ತಪ್ಪಿಹೋಗುವುದಿಲ್ಲವೆ? ಅದಕ್ಕಾಗಿಯಾದರೂ ಚಿಕಿತ್ಸೆ ಮಾಡಿಸಿಕೊಳ್ಳಿ'' ಎಂದರು.

ಅನಂತಸೂರಿ ಗಂಭೀರವಾಗಿ ನುಡಿದರು, "ಕಡಿದ ಹಾವು ಬಲಿಷ್ಠವಾಗಿದ್ದರೆ ಕಡಿಸಿಕೊಂಡ ಹಾವು ಸಾಯುತ್ತದೆ. ಕಡಿಸಿಕೊಂಡ ಹಾವೇ ಬಲಿಷ್ಠವಾಗಿದ್ದರೆ (ಕಡಿಸಿಕೊಂಡ ಹಾವು ಎಂದರೆ ಅನಂತಸೂರಿಯ ಶರೀರ, ದೇಹ) ಕಡಿದ ಹಾವಿಗೆ ಏನೂ ಆಗದು. ಕಡಿಸಿಕೊಂಡ ಹಾವು ದೇವರ ಸೇವೆಯನ್ನು ಮುಂದುವರಿಸುತ್ತದೆ'' ಎಂದರು. ಅವರ ಮಾತುಕೇಳಿದ ಜನ ವಿಸ್ಮಿತರಾದರು.

ಅನಂತಸೂರಿ ತಮ್ಮ ಕೆಲಸವನ್ನು ಮುಂದುವರಿಸಿ ಪೂರೈಸಿದರು. ಅನಂತರ ಸ್ವಾಮಿ ಪುಷ್ಕರಿಣಿಗೆ ಹೋಗಿ ಸ್ನಾನ ಮಾಡಿದರು. ದೇವಸ್ಥಾನಕ್ಕೆ ಹೋಗಿ ದೇವರ ದರ್ಶನ ಮಾಡಿದರು. ದೇವರ ತೀರ್ಥವನ್ನು ಪ್ರಸಾದವನ್ನು ಸ್ವೀಕರಿಸಿದರು. ಅವರಿಗೆ ಹಾವಿನ ವಿಷದಿಂದ ಯಾವ ಅಪಾಯವೂ ಆಗಲಿಲ್ಲ.

ರಾಮಾನುಜರಂತೆಯೇ ಅನಂತಸೂರಿಯೂ ಹಲವಾರು ಜನ ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಿದ್ದರು. ಒಮ್ಮೆ ಅವರಲ್ಲಿಗೆ ಒಬ್ಬ ವಿದ್ಯಾರ್ಥಿಯು ಬಂದನು. ಅವನನ್ನು ರಾಮಾನುಜರ ಶಿಷ್ಯ ಪರಾಶರಭಟ್ಟರು ಕಳುಹಿಸಿದ್ದರು. ಆತ ಒಮ್ಮೆ ಪರಾಶರಭಟ್ಟರನ್ನು ವೈಷ್ಣವರೆಂದರೆ ಹೇಗಿರಬೇಕು ಎಂದು ಕೇಳಿದ. ಅವರು "ನೀನು ತಿರುಪತಿಗೆ ಹೋಗು. ಅನಂತ ಸೂರಿಯವರನ್ನು ಕೇಳು. ಅವರು ನಿನ್ನ ಪ್ರಶ್ನೆಗೆ ಉತ್ತರ ಹೇಳುತ್ತಾರೆ'' ಎಂದು ಹೇಳಿದರು. ಪರಾಶರಭಟ್ಟರ ಸಲಹೆಯಂತೆ ಆ ತರುಣನು ತಿರುಪತಿಗೆ ಬಂದು ಅನಂತಸೂರಿಯವರಲ್ಲಿ ವಿದ್ಯಾರ್ಥಿಯಾಗಿ ಸೇರಿದನು.

ಆರುತಿಂಗಳ ಕಾಲ ಆ ತರುಣನು ಅವರಲ್ಲಿಯೇ ಇದ್ದನು. ಅನಂತಸೂರಿ ಅವನಿಗೆ ಯಾವ ರೀತಿಯ ಉಪದೇಶವನ್ನೂ ಕೊಡಲಿಲ್ಲ, ಪಾಠವನ್ನೂ ಹೇಳಲಿಲ್ಲ. ಆತನೂ ಅವರನ್ನು ಕೇಳಲಿಲ್ಲ.

ಅನಂತಸೂರಿ ಅನ್ನದಾನವನ್ನು ಮಾಡುವುದರಲ್ಲಿಯೂ ಹೆಸರು ಪಡೆದಿದ್ದರು. ತಿರುಪತಿಯ ಯಾತ್ರೆಗೆ ಬಂದ ಅನೇಕ ಜನ ವೈಷ್ಣವರಿಗೆ ಅವರು ಪ್ರೀತಿ ಆದರಗಳಿಂದ ಊಟಮಾಡಿಸುತ್ತಿದ್ದರು. ನಿತ್ಯವೂ ಸಾಧಾರಣವಾಗಿ ನಾಲ್ಕು ಪಂಕ್ತಿಗಳಲ್ಲಿ ಊಟ ಹಾಕುತ್ತಿದ್ದರು. ಶ್ರೀರಂಗದ ವಿದ್ಯಾರ್ಥಿಯು ನಿತ್ಯವೂ ಮೊದಲ ಪಂಕ್ತಿಯಲ್ಲಿ ಕುಳಿತು ಊಟ ಮಾಡುತ್ತಿದ್ದನು.

ಒಂದುದಿನ ಮೊದಲ ಪಂಕ್ತಿಯ ಊಟಕ್ಕೆ ಕುಳಿತಿದ್ದ ಯುವಕನನ್ನು ಸೂರಿಯವರು ಎಬ್ಬಿಸಿಬಿಟ್ಟರು. ಆತ ಕಾದಿದ್ದು ಎರಡನೆಯ ಪಂಕ್ತಿಯಲ್ಲಿ ಊಟಕ್ಕೆ ಕುಳಿತನು. ಆ ಪಂಕ್ತಿಯಿಂದಲೂ ಆತನನ್ನು ಎಬ್ಬಿಸಿಬಿಟ್ಟರು. ಆತ ಮೂರನೆಯ ಸಲ ಎಲೆ ಹಾಕಿದಾಗ ಕುಳಿತಾಗಲೂ ಅವನನ್ನು ಸೂರಿ ಎಬ್ಬಿಸಿಬಿಟ್ಟರು. ನಾಲ್ಕನೆಯ ಸಲ ಕೆಲಸದವರು: ಮನೆಯ ಆಳುಕಾಳುಗಳು ಊಟಕ್ಕೆ ಕುಳಿತಾಗ ಆ ಯುವಕನೂ ಊಟಕ್ಕೆ ಕುಳಿತನು. ಆಗಲೂ ಅವನನ್ನು ಊಟ ಮಾಡದಂತೆ ತಡೆದು ಎಬ್ಬಿಸಿಬಿಟ್ಟರು. ಎಲ್ಲರಿಗೂ ಆಶ್ಚರ್ಯವೂ ಆಯಿತು. ಬ್ರಾಹ್ಮಣ ಯುವಕನನ್ನು ಸೂರಿಯವರು ಪದೇ ಪದೇ ಅವಮಾನಪಡಿಸುತ್ತಿದ್ದಾರಲ್ಲ ಎಂದು ಅನೇಕರು ಆ ಯುವಕನಲ್ಲಿ ಅನುಕಂಪವನ್ನು ತೋರಿದರು.

ಆ ದಿನ ಅನಂತಸೂರಿಯವರು ಎಲ್ಲರಿಗಿಂತ ಕೊನೆಯ ಸಲ ಊಟಕ್ಕೆ ಕುಳಿತರು. ಆ ತರುಣನನ್ನು ಕರೆದು ತಮ್ಮೊಡನೆ ಊಟಕ್ಕೆ ಕುಳ್ಳಿರಿಸಿಕೊಂಡರು. ಉಪಚಾರ ಮಾಡಿ ಅಡುಗೆಯನ್ನು ಬಡಿಸಿದರು. "ಅಪ್ಪ, ಇಂದಿಗೆ ನಿನ್ನ ವಿದ್ಯಾಭ್ಯಾಸ ಪೂರೈಸಿತು. ನೀನು ಶ್ರೀರಂಗಕ್ಕೆ ಹಿಂತಿರುಗಬಹುದು. ನಿಜವಾದ ವೈಷ್ಣವನು ಹೇಗಿರುತ್ತಾನೆಂದು ನೀನು ಕೇಳಿದ್ದೀಯೆ, ಈದಿನ ನಿನಗೆ ನಾನು ಅದಕ್ಕೆ ಉತ್ತರ ಹೇಳುತ್ತೇನೆ.''

"ನಿಜವಾದ ವೈಷ್ಣವನು ಕೊಕ್ಕರೆಯಂತೆ, ಕುಕ್ಕುಟದಂತೆ, ಲವಣದಂತೆ, ಮತ್ತು ನಿನ್ನಂತೆಯೇ ಇರುತ್ತಾನೆ'' ಎಂದರು. "ಕೊಕ್ಕರೆಯು ಯಾವಾಗಲೂ ನೀರಿಗೆ ಸಮೀಪವಾಗಿಯೇ ಇರುತ್ತದೆ. ಕೆರೆ, ಕೊಳ, ಹೊಳೆಗಳ ಸಮೀಪದಲ್ಲಿರುತ್ತದೆ. ಹಾಗೆಯೇ ವೈಷ್ಣವನು ವಿಷ್ಣು ಭಕ್ತರ ಸಮೂಹದಲ್ಲಿ ಇರಬೇಕು. ತೀರ್ಥ ಕ್ಷೇತ್ರಗಳ ಸಮೀಪದಲ್ಲಿಯೇ ವಾಸಮಾಡಬೇಕು. ಕೊಕ್ಕರೆಯ ಮೈಬಣ್ಣ ಬಿಳಿದಾಗಿರುವಂತೆ ವೈಷ್ಣವನ ಶರೀರ ಮತ್ತು ಮನಸ್ಸು ಶುದ್ಧವಾಗಿರಬೇಕು. ನಿಷ್ಕಲ್ಮಷವಾಗಿರಬೇಕು.

(37 ನೇ ಪುಟ ನೋಡಿ)

ಯುವವಾಣಿ

# ವಿಠಲದೇವಾಲಯ

ಡಾ ॥ ಕೆ. ಸರ್ವೋತ್ತಮನ್

ಒಂದೊಂದು ಪ್ರಾಂತದಲ್ಲಿ ಒಂದೊಂದು ದೇವತಾಮೂರ್ತಿಗೆ ಪ್ರಾಧಾನ್ಯ. ಕಾಶಿಯಲ್ಲಿ ವಿಶ್ವನಾಥಸ್ವಾಮಿಗೆ, ಕಂಚಿಯಲ್ಲಿ ವರದರಾಜರಿಗೆ ಶ್ರೀರಂಗದಲ್ಲಿ ರಂಗನಾಥಸ್ವಾಮಿಗೆ, ಪಂಡರಪುರದಲ್ಲಿ ವಿಠಲದೇವರಿಗೆ ಖ್ಯಾತಿ. ಆದರೂ ಇತರ ಮೂರ್ತಿಗಳಿಗೆ ಪ್ರವೇಶ, ಆಧಿಕ್ಯ ಏರ್ಪಡುವುದು ಉಂಟು. ಇದಕ್ಕೆ ಹಲವಾರು ಕಾರಣಗಳು. ಆಯಾ ಮತಬೋಧಕರ ಪ್ರಚಾರ, ಸಾಮಾನ್ಯ ಜನರ ನಂಬಿಕೆ, ಪಾಲಕರ ಅಭಿಪ್ರಾಯಗಳನ್ನು ಕಾರಣಗಳಾಗಿ ಹೇಳಬಹುದು.

ಪಂಡರಪುರದಲ್ಲಿ ನೆಲೆಗೊಂಡ ಮೂರ್ತಿ ವಿಠಲ. ಪಾಂಡುರಂಗನ ಉಲ್ಲೇಖ ಭಾಗವತದಲ್ಲಿ ಕಾಣುತ್ತದೆ. ಬಲರಾಮನು ನೆಲೆಸಿದ ಪ್ರಸಿದ್ಧ ಯಾತ್ರಾಸ್ಥಲವಿದೇ. ಮಹಾರಾಷ್ಟ್ರದಲ್ಲಿದ್ದರೂ ಕನ್ನಡಿಗರಿಗೆ ಆರಾಧ್ಯಮೂರ್ತಿ ವಿಠಲನೇ. ಇದಕ್ಕೆ ಪ್ರಧಾನ ಕಾರಣ ಮಧ್ವಾಚಾರ್ಯರ ದ್ವೈತಮತ ಪ್ರಚಾರ. ಹರಿದಾಸರು ವಿಠಲನನ್ನು ಸೇವಿಸಿ ಧನ್ಯರಾಗಿದ್ದಾರೆ. ಅವರ ಮುಕುಟಗಳಲ್ಲಿ, ಅಂಕಿತಪದಗಳಲ್ಲಿ ವಿಠಲ ನಾಮವು ಕಾಣುತ್ತವೆ. ಪುರಂದರವಿಠಲ, ರಂಗವಿಠಲ, ವಿಜಯವಿಠಲ, ಗೋಪಾಲವಿಠಲ, ಜಗನ್ನಾಥವಿಠಲ – ಉದಾಹರಣೆಗಳಾಗಿ ಹೇಳಬಹುದು.

ಕನ್ನಡೇತರ ಪ್ರಾಂತಗಳಲ್ಲೂ ವಿಠಲ ದೇವಸ್ಥಾನಗಳು ಕಾಣುತ್ತವೆ. ಪ್ರಧಾನವಾಗಿ ವಿಜಯನಗರ ಪರಿಪಾಲಕರ ಕಾಲದಲ್ಲಿ ಈ ವಿಠಲ ದೇವಸ್ಥಾನಗಳ ನಿರ್ಮಾಣ ವ್ಯಾಪ್ತವಾಗಿರಬೇಕು. ಕೃಷ್ಣದೇವರಾಯರ ಕಾಲಕ್ಕೆ ಪೂರ್ವವೇ ವಿಜಯನಗರದಲ್ಲಿ ವಿಠಲ ಆಲಯಗಳು ಇರಬಹುದು. ಆಂಧ್ರ ಸಾಹಿತ್ಯದಲ್ಲಿ ಪ್ರಮುಖ ವಾಗ್ಗೇಯಕಾರರಾದ ತಾಳ್ಲಪಾಕ ಅನ್ನಮಾಚಾರ್ಯರು ವಿಠಲನನ್ನು ಕುರಿತು ಹಲವಾರು ಕೀರ್ತನೆಗಳು ಹಾಡಿದ್ದಾರೆ.

ತಮ್ಮ ಕೀರ್ತನೆಗಳಲ್ಲಿ ವಿಠ್ಠಲಾ, ವಿಠ್ಠಲರಾಯ, ವಿಠ್ಠಲೇಶ್ವರಾ, ಶ್ರೀ ವಿಠ್ಠಲೇಶ ಪಂಡರಂಗಿನಾಥಾ, ಪಂಡರಂಗಿ ವಿಠ್ಠಲನೆಂದು ಸಂಬೋಧಿಸಿದ್ದಾರೆ.

ಗಟ್ಟಿಗೆ ಪುಂಡರೀಕುಡು<br>
ಕಡು ವೇಡುಕ ಪೆಟ್ಟನೆ<br>
ಯಿಟ್ಟಿಕ ಪೇಟಪೈನುನ್ನಾಡೀ ವಿಠ್ಠಲುಡು

ಎಂದು ಶ್ರೀಮನ್ನಾರಾಯಣನು ವಿಠಲನಾಗಿ ನಿಂತಿದ್ದ ಕಾರಣ ಸ್ಪಷ್ಟಪಡಿಸಿದ್ದಾರೆ ಮತ್ತು ಆ ವಾಗ್ಗೇಯಕಾರರು ವಿಠಲನನ್ನು ವೆಂಕಟರಮಣನಲ್ಲಿ ಭಾವಿಸಿದ್ದಾರೆ. ತಿರುಮಲೆ ತಿಮ್ಮಪ್ಪನೇ 'ಶ್ರೀ ವೆಂಕಟಾದ್ರಿ ವಿಠ್ಠಲೇಶ'ನೆಂದು ಹೊಗಳಿದ್ದಾರೆ. ಪಂಡರಪುರದಲ್ಲಿದ್ದವನು ವೆಂಕಟಪತಿಯೆಂದು ಹಾಡಿದ್ದಾರೆ.

ಬಲ್ಲಿದವು ಶ್ರೀ ವೆಂಕಟಪತಿವೈ ಪಾಂಡುರಂಗಾನ<br>
ಚಲ್ಲಗಾ ನೆಲಕೊಂಟಿವಿ ಜಯ ವಿಠಲೇಶ್ವರಾ

ಹರಿದಾಸರು ಇದೇ ಬಗೆಯಲ್ಲಿ ತಿಮ್ಮಪ್ಪನನ್ನು ವಿಠಲನಾಗಿ ದರ್ಶಿಸುವುದು ನಮಗೆ ತಿಳಿದ ಅಂಶವೇ. 'ಕಂಡೆ ನಾ ವೆಂಕಟನೆಂಬ ವಿಠಲನ' ಎಂದು ಹಾಡುವರು ಪುರಂದರದಾಸರು. ಆಂಧ್ರ ಕನ್ನಡ ಭಕ್ತರಿಂದ ವಿಠಲ ಆಲಯಗಳು ಪ್ರಸಿದ್ಧವಾದವು.

ತಿರುಪತಿ ತಿರುಮಲೆಯಲ್ಲಿ ಹಲವಾರು ದೇವಸ್ಥಾನಗಳು ಪ್ರಸಿದ್ಧವಾದವು. ಆದರೆ ಪ್ರಾಚೀನ ಕಾಲದಲ್ಲಿದ್ದು ಮಧ್ಯಕಾಲದಲ್ಲಿ ಗತಪ್ರತಿಭವಾದ ದೇವಸ್ಥಾನ ವಿಠಲ ದೇವಸ್ಥಾನ. ತಿರುಪತಿಯಲ್ಲಿದ್ದ ಗೋವಿಂದರಾಜಸ್ವಾಮಿ ದೇವಸ್ಥಾನ ಕುಡ್ಯಗಳದಲ್ಲಿದ್ದ ಕೆಲವು ಶಾಸನಗಳು ಇದಕ್ಕೆ ಆಧಾರ. ಲಭ್ಯವಾದ ಶಾಸನಗಳು ಒಂಬತ್ತು.

ಪ್ರಥಮ ಶಾಸನವು 16 ನೆಯ ಶತಮಾನದ್ದು (1547) ಈ ಶಾಸನವು ಉದಯಗಿರಿ ದೇವರಾಯ ಭಟ್ಟರಿಂದ ಪ್ರಕಟಿತವಾಯಿತು. ಅವರು ಉದಯಗಿರಿ ನರಸಿಂಹಭಟ್ಟರ ಪುತ್ರರು. ವಶಿಷ್ಠ ಗೋತ್ರರು. ಆಶ್ವಲಾಯನ ಸೂತ್ರಕ್ಕೆ ಸೇರಿದವರು. ಪೊಟ್ಲಪಾಟಿ ತಿಮ್ಮರಾಯರ ಸಚಿವರು. ಅವರು ನಾಲ್ಕು ಶಾಸನಗಳು ಹಾಕಿದ್ದಾರೆ. ತಿರುಪತಿಯಲ್ಲಿ ಹನುಮತ್ಸನ್ನಿಧಾನದಲ್ಲಿ ಅವರು ವಿಠಲಾಲಯವನ್ನು ನೆಲೆಗೊಳಿಸಿದರು. ಶ್ರೀ ವಿಠ್ಠಲ ಮೂರ್ತಿಗಾಗಿ 'ದಿತ್ತಮ್' ಸಿದ್ಧಪಡಿಸಿದರು. ಸಂವತ್ಸರದಲ್ಲಿ 52 ಶನಿವಾರಗಳಲ್ಲಿ ತಿರುಮಂಜನಕ್ಕೆ ವ್ಯವಸ್ಥೆ ಮಾಡಿದರು.

ಉದಯಗಿರಿ ಭಟ್ಟರಲ್ಲದೆ ತಿರುಪತಿ ವರ್ತಕರು, ತಿರುಮಲೆಯಲ್ಲಿ ಪ್ರಸಾದವಿಕ್ರಯ ಮಾಡುವರು ಕೈಂಕರ್ಯಗಳನ್ನು ಮಾಡಿದ್ದಾರೆ. ಕಂದಾಡೈ ಶ್ರೀ ರಂಗಾಚಾರ್ಯರ ಶಿಷ್ಯರು ತಿರುವೆಂಕಟ ಕೋರಿ ದೇವಸ್ಥಾನ ಧನಾಗಾರಕ್ಕೆ 40 ಪಣಗಳು ಕೊಟ್ಟರು. ಪಾರುವೇಟ ಮಹೋತ್ಸವ ಕಾಲದಲ್ಲಿ ತಾಳ್ಳಪಾಕ ಅವರ ಮನೆ ಎದುರಲ್ಲಿ ಸ್ವಾಮಿ ಮೆರವಣಿಗೆ ಬರುವಾಗ 'ಮನೋಹರಪ್ಪಡಿ' ಪ್ರಸಾದ ನೈವೇದ್ಯಮಾಡಬೇಕೆಂದು ಶಾಸಿಸಿದ್ದಾರೆ. ಇದೇ ಉತ್ಸವಕಾಲದಲ್ಲಿ 'ಸುಕಿಯನ್‌ಪ್ಪಡಿ' ಪ್ರಸಾದಕ್ಕೆಂದು ಪೆರಿಯತಿಮ್ಮಯ್ಯ, ಚಿಕ್ಕ ತಿಮ್ಮಯ್ಯನವರು ಏರ್ಪಾಟುಮಾಡಿದರು. ಪಂಗುನಾಡಿನಲ್ಲಿದ್ದ ಸೆವ್ವನಾಯಕ್ಕರ್ ಇದೇ ಉತ್ಸವ ಕಾಲದಲ್ಲಿ ಒಂದು 'ಮನೋಹರಪ್ಪಡಿ'ಗಾಗಿ ತೀರ್ಮಾನಮಾಡಿದ್ದಾರೆ. ಇವೆಲ್ಲವು ಉತ್ಸವಕಾಲದಲ್ಲಿ ನಡೆಯುವ ಪ್ರಸಾದ ಕೈಂಕರ್ಯಗಳು.

ತಿರುಪತಿ ವಂಗೀಪುರ ನಾರಾಯಣ ಸೆಟ್ಟಿ ಕುಮಾರರಾದ ಶ್ರೀ ನಾರಾಯಣ ಸೆಟ್ಟಿ ಒಂದು 'ಅಪ್ಪಪ್ಪಡಿ'ಗಾಗಿ 30 ಪಣಗಳು ಭಂಡಾರಕ್ಕೆ ಅರ್ಪಿಸಿದರು. ಚೈತ್ರಮಾಸದ ಪ್ರಥಮ ತಿಥಿಯಲ್ಲಿ ವಿಠಲ ಸ್ವಾಮಿಗಾಗಿ ಒಂದು ಮನೋಹರಪ್ಪಡಿಯನ್ನು ಸೆಟ್ಟಿಲಾರ್ ಕುಪ್ಪಯ್ಯನವರು ತಮ್ಮ ಉಭಯವಾಗಿ ಅರ್ಪಿಸಿದರು.

ಇವರಲ್ಲದೆ ಶ್ರೀನಿವಾಸಯ್ಯಂಗಾರ್ ಅವರು ವಿವಿಧ ಸೇವೆಗಳಿಗಾಗಿ 2000 ಬಂಗಾರ ನಾಣ್ಯಗಳನ್ನು ಶ್ರೀ ಭಂಡಾರಕ್ಕೆ ಅರ್ಪಿಸಿದರು. ಗೋವಿಂದರಾಜಸ್ವಾಮಿಯವರಿಗೆ ವೈಶಾಖಮಾಸದಲ್ಲಿ ನಡೆಯುವ ಬ್ರಹ್ಮೋತ್ಸವಕಾಲದಲ್ಲಿ ಸ್ವಾಮಿಯವರು ವಿಠಲ ದೇವಸ್ಥಾನಕ್ಕೆ ಬರುವಾಗ ವಿಶೇಷ ಪ್ರಸಾದ ನಿವೇದನಕ್ಕಾಗಿ ಒಂದು ಗ್ರಾಮಾದಾಯವನ್ನು ಪ್ರತ್ಯೇಕಪಡಿಸಿದ್ದಾರೆ. ಆ ಗ್ರಾಮದ ಹೆಸರು ಪೆರಿಯ ಎಕ್ಕಲೂರ್. ಇದು ಗುತ್ತಿ ಸೀಮೆಗೆ ಸೇರಿದ ಗ್ರಾಮ.

ಈ ಶಾಸನಗಳಿಂದ ತಿಳಿಯುವ ವಿಶೇಷಗಳು; ವಿಠಲನು ಮಾಧ್ವರ ಆರಾಧ್ಯಮೂರ್ತಿಯಾಗಿದ್ದರೂ ತಿರುಪತಿಯಲ್ಲಿದ್ದ ವಿಠಲನಿಗೆ ಸೇವಾ ಕೈಂಕರ್ಯಗಳು ಮಾಡಿದವರು ಮಾಧ್ವೇತರರು; ಅವರಲ್ಲಿ ವಿಶಿಷ್ಟಾದ್ವೈತರು, ಸಾಮಾನ್ಯ ವರ್ತಕರೂ ಇದ್ದಾರೆ. ವಿಠಲನಿಗೆ ಮುಖ್ಯವಾದ ಪರ್ವದಿನಪ್ರಶಂಸೆಗಳು ಶಾಸನದಲ್ಲಿ ಕಾಣುವುದಿಲ್ಲ. ಇಂತಹ ಪ್ರಸಿದ್ಧಿ ಹೊಂದಿದ ದೇವಾಲಯವು ಇವತ್ತು ದೃಗ್ಗೋಚರವಾಗುವುದಿಲ್ಲ. ಕಪಿಲ ತೀರ್ಥ ರಸ್ತೆಯಲ್ಲಿ ಒಂದು ವಿಠಲ ದೇವಸ್ಥಾನವು ಮಾತ್ರವಿದೆ. ಆದರೆ ಅದು ಪ್ರಾಚೀನವಲ್ಲ.

ಒಂದು ಪತಾಕೆ ಹಿಡಿದುಕೊಂಡು ಶ್ರೀ ಚೂರ್ಣವೋ ಅಲ್ಲವೆ ಗೋಪೀಚಂದನವೋ

(32 ನೇ ಪುಟ ನೋಡಿ)

# ಭರತನ ದೇವಸ್ಥಾನ

ಭಾರತದಲ್ಲಿ ಬಹಳ ಅಪರೂಪ ಎನ್ನಬಹುದಾದ ಭರತನ ದೇವಸ್ಥಾನ ಕೇರಳದ ತ್ರಿಚೂರ್ ಜಿಲ್ಲೆಯ ಇರಂಜಾಲಕುಡವೆಂಬಲ್ಲಿದೆ. ದೇವತೆಯನ್ನು ಕೂಡಲ ಮಾಣಿಕ್ಯ ಎನ್ನುತ್ತಾರೆ. ಇದಕ್ಕೆ ಒಂದೆರಡು ಕಥೆಯೂ ಉಂಟು. ಒಮ್ಮೆ ಭಕ್ತನೊಬ್ಬ ವಿಗ್ರಹದಿಂದ ಮಹಾಬೆಳಕು ಹೊರಬೀಳುವುದನ್ನು ಕಂಡ. ಅವನು ಸಂತೋಷದಿಂದ ಕೂಗಿಕೊಂಡಾಗ ಅಲ್ಲಿಗೆ ಬಂದ ಇತರರಿಗೂ ಅದನ್ನೂ ಕಂಡು ಆಶ್ಚರ್ಯವಾಯಿತು. ಕೆಲವರು ಆ ಬೆಳಕು ಮಾಣಿಕ್ಯದಿಂದ ಹೊರಬೀಳುವ ಬೆಳಕಿನಂತಿದೆಯೆಂದರು. ಆಗ ಕಾಯುಮ್‌ಕುಲಮ್ ಎಂಬಲ್ಲಿನ ರಾಜನೊಬ್ಬನನ್ನು ಬಿಟ್ಟರೆ ಇನ್ನಾರ ಬಳಿಯೂ ಅಂತ ಮಾಣಿಕ್ಯವಿರಲಿಲ್ಲ. ಕೆಲವರು ಪರೀಕ್ಷಿಸಲೆಂದು ಆ ರಾಜನ ಬಳಿಯ ಮಾಣಿಕ್ಯವನ್ನು ತರಲು ದೂತನನ್ನು ಕಳುಹಿಸಿದರು. ಮಾಣಿಕ್ಯವು ಬಂದನಂತರ ಅರ್ಚಕರು ಮಂತ್ರ ಪಠಣದೊಂದಿಗೆ ವಿಗ್ರಹದಿಂದ ಬೆಳಕು ಬರುತ್ತಿದ್ದ ಸ್ಥಳದಲ್ಲಿ ಈ ಮಾಣಿಕ್ಯವನ್ನು ಇಟ್ಟು ಹೋಲಿಸಿದರು. ಅವೆರಡರಿಂದ ಬರುತ್ತಿದ್ದ ಬೆಳಕೂ ಒಂದೇ ಆಗಿತ್ತು. ನಂತರ ಅವರು ಈ ಮಾಣಿಕ್ಯವನ್ನು ತೆಗೆಯಲು ಹೋದಾಗ ಅದು ವಿಗ್ರಹದೊಂದಿಗೇ ಲೀನವಾಗಿ ಹೋಯಿತು. ಎರಡು ಮಾಣಿಕ್ಯಗಳ ಕೂಡುವಿಕೆಯಿಂದಾದುದರಿಂದ ಇದನ್ನು ಕೂಡಲ ಮಾಣಿಕ್ಯವೆಂದು ಕರೆದರು.

ಇನ್ನೊಂದು ಸಿದ್ಧಾಂತದ ಪ್ರಕಾರ ಹಿಂದೆ ಚಾರುಕ್ಕುಡಿ ಹಾಗೂ ಕುರುಮಲ್ಲಿ ಎಂಬ ನದಿಗಳು ಒಂದೆಡೆ ಸೇರುವ ಜಾಗದಲ್ಲಿ ಈ ದೇವಸ್ಥಾನ ಇದ್ದುದರಿಂದ ಇದನ್ನು ಕೂಡಲಮಾಣಿಕ್ಯವೆಂದರು. ಕೂಡಲ ಎಂದರೆ ಸಂಗಮ ಎಂದರ್ಥ.

ಇಲ್ಲಿಯ ಭರತನನ್ನು ಸಂಗಮೇಶ್ವರನೆಂದೂ ಕರೆಯುತ್ತಾರೆ. ಹಿಂದೆ ಯೋಗಿಯೊಬ್ಬನಿಗೆ ತನ್ನ ತಪಃಶಕ್ತಿಯಿಂದ ವಿಗ್ರಹಗಳಲ್ಲಿನ ದಿವ್ಯಚೈತನ್ಯವನ್ನೆಲ್ಲಾ ಹೀರಿ ತನ್ನ ಶಂಖುವಿನೊಳಗೆ ಹಿಡಿದಿಡುವ ಅಭ್ಯಾಸವಿತ್ತು. ಹಾಗೆ ಭರತನ ವಿಗ್ರಹದಿಂದಲೂ ಚೈತನ್ಯವನ್ನು ಹೀರಬೇಕೆಂದಿರುವಾಗ ಶಂಖುವು ಬಿದ್ದು ಒಡೆದುಹೋಗಿ ಎಲ್ಲ ದೇವತೆಗಳ ಚೈತನ್ಯವೂ ಭರತನ ವಿಗ್ರಹದಲ್ಲಿ ಐಕ್ಯವಾದುದರಿಂದ ಇದನ್ನು ಸಂಗಮೇಶ್ವರನೆಂದರು.

ಮತ್ತೊಂದು ಸಿದ್ಧಾಂತದ ಪ್ರಕಾರ ಈ ದೇವಸ್ಥಾನ ದಿಗಂಬರರಿಗೆ ಮೀಸಲಾದ ಜೈನ ಬಸದಿಯಾಗಿತ್ತಂತೆ. ವಿಗ್ರಹವು ಬೆತ್ತಲೆಯಾಗಿದ್ದು ಈ ಸಿದ್ಧಾಂತಕ್ಕೆ ಪುಟ ಕೊಡುವಂತಿದೆ.

ಇಲ್ಲಿಯ ಭರತ, ರಾಮನು ವನವಾಸದಲ್ಲಿರುವುದರಿಂದ ಎಲ್ಲವನ್ನು ತ್ಯಜಿಸಿ ತಪವನ್ನಾಚರಿಸುತ್ತಿರುವನು. ಆದ್ದರಿಂದ ಹೂ ಗಂಧಾಕ್ಷತೆಗಳೊಂದೂ ಇಲ್ಲದೆ ಕೇವಲ ತುಳಸಿಯ ಪೂಜೆ ಮಾತ್ರ ಇಲ್ಲಿ ನಡೆಯುತ್ತದೆ. ಬಹುಶಃ ಉಪದೇವತೆಗಳಿಲ್ಲದ ಕೆಲವೇ ದೇವಸ್ಥಾನಗಳಲ್ಲಿ ಇದೂ ಒಂದು. ಇಲ್ಲಿ ಗಣಪತಿಯ ವಿಗ್ರಹವೂ ಸಹ ಎಲ್ಲೂ ಕಂಡುಬರುವುದಿಲ್ಲ.

ಇಲ್ಲಿ ತುಲಾಮಾಸದಲ್ಲಿ ಹುತ್ತರಿ ಹಬ್ಬವನ್ನಾಚರಿಸುತ್ತಾರೆ. ಆಗ ಭಕ್ತರೆಲ್ಲರೂ ನೀಡುವ ಪ್ರಸಾದವನ್ನು ಸ್ವೀಕರಿಸುವ ದೇವತೆಗೆ ಅಜೀರ್ಣವಾಗುತ್ತದಂತೆ. ಆದ್ದರಿಂದ ಮಾರನೇ ದಿನ ಜೀರಿಗೆಯಿಂದ ಮಾಡಿದ ಕಷಾಯವನ್ನು ದೇವರಿಗರ್ಪಿಸಲಾಗುತ್ತದೆ. ಇವನ್ನು ಭಕ್ತರಿಗೂ ಹಂಚುತ್ತಾರೆ.

ಕೇರಳದ ತಿರುವನಂತಪುರದ ಅನಂತ ಪದ್ಮನಾಭಸ್ವಾಮಿ ದೇವಸ್ಥಾನವನ್ನು ಬಿಟ್ಟರೆ ಇದು ಎರಡನೇ ದೊಡ್ಡ ದೇವಸ್ಥಾನವೆನ್ನುತ್ತಾರೆ. ಕೇರಳದ ಇತರ ದೇವಸ್ಥಾನಗಳಂತೆ ಇಲ್ಲೂ ಸಹ ಕಲ್ಲಿನೊಂದಿಗೆ ಮರವನ್ನು ಧಾರಾಳವಾಗಿ ಉಪಯೋಗಿಸಿದ್ದಾರೆ. ಗರ್ಭಗುಡಿಯ ಮೇಲ್ಭಾಗದಲ್ಲಿ ದೊಡ್ಡದಾದ ಗೋಳದಂತಹ ಗೋಪುರವಿದೆ. ಇದು ಚೆಂಡುಹೂವಿನಂತಿದ್ದು ತಾಮ್ರದ ಹಾಳೆಯಿಂದ ಹೊದಿಸಲ್ಪಟ್ಟಿದೆ. ಗುಡಿಯಲ್ಲಿ ಮರದ ಚೌಕಟ್ಟುಗಳಿದ್ದು ಅವುಗಳಿಗೆ ಸಾವಿರಾರು ದೀಪಗಳನ್ನು ತಗುಲಿಸಲಾಗಿದೆ. ಹಬ್ಬಗಳಲ್ಲಿ ಈ ಎಲ್ಲ ದೀಪಗಳನ್ನೂ ಹಚ್ಚಿರುವುದರಿಂದ ಇಡೀ ಪ್ರದೇಶವೇ ಪ್ರಕಾಶಮಾನವಾಗಿರುತ್ತದೆ. ಮರದ ಕೆತ್ತನೆಯ ಕೆಲಸಕ್ಕೂ ಈ ದೇವಾಲಯ ಪ್ರಸಿದ್ಧವಾಗಿದೆ. ಗರ್ಭಗುಡಿಯೆದುರಿನ ಸಭಾಂಗಣದಲ್ಲಿ ಹರಿಕಥೆ ಹಾಗೂ ನೃತ್ಯಕಾರ್ಯಕ್ರಮಗಳು ಉತ್ಸವದ ಸಂದರ್ಭದಲ್ಲಿ ಏರ್ಪಡುತ್ತವೆ.

ಪ್ರತಿವರುಷ ಉತ್ತರಫಾಲ್ಗುಣ ನಕ್ಷತ್ರದಲ್ಲಿ ಹತ್ತು ದಿನಗಳ ಕಾಲ ಉತ್ಸವ ನಡೆದು ಇಡೀ ಪಟ್ಟಣವೇ ಚಂಡಮದ್ದಳೆ ಮುಂತಾದ ವಾದ್ಯಗಳ ನಾದದಿಂದ ತುಂಬಿರುತ್ತದೆ. ನಾಡಿನ ದೇವಸ್ಥಾನಗಳಲ್ಲಿ ಭಕ್ತಿಯ ವಿಶೇಷತೆಯಿಂದಾಗಿ ಇಲ್ಲಿನ ಭರತನ ಈ ದೇವಸ್ಥಾನ ಇನ್ನೂ ತನ್ನ ಪ್ರಾಚೀನತೆಯನ್ನು ಉಳಿಸಿ ಕೊಂಡಿದೆ.

**ಶ್ರೀ ಸುರೇಶಮೂನ**



ದಾಕ್ಷಿಣಾತ್ಯ ಜನಪದದಲ್ಲಿ ಸೌರಾಷ್ಟ್ರಪುರವು ವಿಶೇಷವಾಗಿ ಸೊಗಯಿಸುತ್ತಿದೆ. ಅದರ ರಾಜ ಅಮರಶಕ್ತಿ ಎಂಬುವನು. ಅವನಿಗೆ ಪ್ರಶಮಿತಗುಣರೂ ಅವಿನಯತರ್ಕಚಿತ್ತೋನ್ಮತ್ತರೂ, ಅಖಿಲ ವಿಷಯ ಕ್ರೀಡಾನತಗತರೂ ಆದ ಏಕಶಕ್ತಿ, ವಸುಶಕ್ತಿ, ರುದ್ರಶಕ್ತಿಗಳೆಂಬ ಮೂವರು ಮಕ್ಕಳಿದ್ದರು. ಅವರನ್ನು ಸಮಸ್ತನೃಪವಿದ್ಯಾಧರರಾಗುವ ಹಾಗೆ ಮಾಡುವುದಕ್ಕಾಗಿ ಸಮಸ್ತಶಾಸ್ತ್ರ ವಿಚಾರ ಸಾರನೂ ಬುದ್ಧಿವೃದ್ಧನೂ ಅನೇಕಶಿಷ್ಯವಿಖ್ಯಾತ ಕೀರ್ತಿಯೂ ಭದ್ರಮೂರ್ತಿಯೂ ಆದ ವಸುಭಾಗ ಭಟ್ಟನು ಈ ಪಂಚತಂತ್ರವನ್ನು ರಚಿಸಿದನು. ಇದನ್ನು ಪಂಡಿತರ ಪ್ರೇರಣೆಯಿಂದ ದುರ್ಗಸಿಂಹನು ಹೊಸದಾಗಿರುವ ಹಾಗೆ ಕನ್ನಡದಲ್ಲಿ ರಚಿಸಿದನು. ಇದರಲ್ಲಿ ಭೇದ ಪ್ರಕರಣ ವರ್ಣನಂ, ಪರೀಕ್ಷಾ ವ್ಯಾವರಣನಂ, ವಿಶ್ವಾಸ ಪ್ರಕರಣಂ, ವಂಚನಾ ಪ್ರಕರಣಂ, ಮಿತ್ರಕಾರ್ಯವರ್ಣನಂ-ಎಂಬ ಐದು ತಂತ್ರಗಳಿವೆ. ಈ ತಂತ್ರಾರ್ಥಗಳನ್ನು ದುರ್ಗಸಿಂಹನು ಈ ರೀತಿ ವಿವರಿಸಿದ್ದಾನೆ. "ಅನೇಕ ಪ್ರಕಾರ ಕಪಟೋಪಾಯಗಳಿಂದ ಅತಿಸ್ನೇಹಿತರೊಳ್ ಪ್ರಥಕ್‌ಭಾವಮಂ ಮಾಳ್ಪುದೇ ಭೇದವೆಂಬುದು, ಆವಕಾರ್ಯಮಂ ವಿಚಾರಪೂರ್ವಕಮಲ್ಲದೆ ನೆಗಳಲಾಗದೆಂಬುದನ್ ಅರಿವುದು 'ಪರೀಕ್ಷೆ' ಎಂಬುದು. ಎಂತೋ ನಂಬದರಂ ನಂಬುವಂತೆ ನುಡಿದೊಂಬಡಿಸಿ ಒಳಪೊಕ್ಕು ನೆಗಳ್ವುದು 'ವಿಶ್ವಾಸ'ವೆಂಬುದು. ಪೆರರ ಬಗೆಯರಿದು ಸಂಧಾನಂಗೈದು ವಂಚಿಸುವುದು 'ವಂಚನೆ'ಯೆಂಬುದು. ಅನ್ಯರೆಲ್ಲರುಮಂ ಅತಿಸ್ನೇಹದಿಂದೆ ತನ್ನವರಂ ಮಾಡಿಕೊಳ್ವುದು 'ಮಿತ್ರಕಾರ್ಯ'ವೆಂಬುದು". ಅದಕ್ಕನುಗುಣವಾಗಿ ಒಂದನೆಯ ಪ್ರಕರಣದಲ್ಲಿ ಎತ್ತಿಗೂ ಸಿಂಹಕ್ಕೂ ಉಂಟಾದ ಸ್ನೇಹವನ್ನು ನರಿಯೊಂದು ಕೆಡಿಸಿತೆಂಬ ಕಥೆಯೂ ಎರಡನೆಯ ಪ್ರಕರಣದಲ್ಲಿ ಬ್ರಾಹ್ಮಣನು ಪರೀಕ್ಷೆ ಮಾಡದೆ ಮುಂಗುಸಿಯನ್ನು ಕೊಂದ ಕಥೆಯೂ ಮೂರನೆಯ ಪ್ರಕರಣದಲ್ಲಿ ನಂಬಿಸಿ ಗೂಗೆಗಳ ಗುಹೆಯನ್ನು ಕಾಗೆಗಳು ಸುಟ್ಟ ಕಥೆಯೂ, ನಾಲ್ಕನೆಯ ಪ್ರಕರಣದಲ್ಲಿ ಮೊಸಳೆಯನ್ನು ಕಪಿ ವಂಚಿಸಿದ ಕಥೆಯೂ, ಐದನೆಯ ಪ್ರಕರಣದಲ್ಲಿ ಕಾಗೆ, ಆಮೆ, ಸಾರಂಗ, ಇಲಿ, ಇವುಗಳ ವಿಶೇಷ ಸ್ನೇಹದ ಕಥೆಯೂ ಉಕ್ತವಾಗಿವೆ.

ಕವಿಯು ಗ್ರಂಥಾದಿಯಲ್ಲಿ ತ್ರಿಮೂರ್ತಿಗಳನ್ನೂ ಸರಸ್ವತಿ, ಚಂದ್ರ, ಮನ್ಮಥ, ಸೂರ್ಯ, ವಿನಾಯಕ, ದುರ್ಗಿ, ಇವರನ್ನೂ ಸ್ತುತಿಸಿ, ವಾಲ್ಮೀಕಿ,ವ್ಯಾಸಾದಿಗಳನ್ನು ನೀತಿಶಾಸ್ತ್ರ ವಿಶಾರದರಾದ ನಾಭೇಯ ಬೃಹಸ್ಪತಿ, ಭೀಷ್ಮ, ಉದ್ಧವ, ಮನು, ವಿಶಾಲಾಕ್ಷ, ಇಭದಂತ, ಕುಬೇರ-ಮೊದಲಾದವರನ್ನೂ, ಚಂದ್ರಗುಪ್ತನಿಗೆ ರಾಜ್ಯವನ್ನು ಕೊಡಿಸಿದ ವಿಷ್ಣುರುಚಿ, ಕಾಳಿದಾಸ, ಬಾಣ, ಮಯೂರ, ಧನಂಜಯ, ಭವಭೂತಿ, ಭಾರವಿ, ಭಟ್ಟಿ, ಮಾಘ, ರಾಜಶೇಖರ, ಕಾಮಂದಕ, ದಂಡಿ ಎಂಬ ಸಂಸ್ಕೃತ ಕವಿಗಳನ್ನೂ ಶ್ರೀವಿಜಯ, ಕನ್ನಮಯ್ಯ, ಚಂದ್ರ, ಪೊನ್ನ, ಪಂಪ, ಗಜಾಂಕುಶ, ಕವಿತಾವಿಲಾಸ ಮೊದಲಾದ ಕನ್ನಡ ಕವಿಗಳನ್ನೂ ಸ್ತುತಿಸಿದ್ದಾನೆ. ಕವಿಯು ಒಬ್ಬೊಬ್ಬ ಪೂರ್ವ ಕವಿಗೂ ಕೊಟ್ಟಿರುವ ವಿಶೇಷಣಗಳು ಅವರ ಸ್ಪಷ್ಟವ್ಯಕ್ತಿತ್ವವನ್ನು ಪ್ರದರ್ಶಿಸತಕ್ಕುವಾಗಿವೆ.

ತನ್ನ ಗ್ರಂಥವನ್ನು ಕವಿಗಮಕಿವಾದಿ ವಾಗ್ಮಿಪ್ರವರನಾದ ಮಾದಿರಾಜ ಮುನಿಪುಂಗವನೆಂಬುವನು ತಿದ್ದಿದನೆಂದು ಹೇಳಿದ್ದಾನೆ.

ಪಂಚತಂತ್ರದಲ್ಲಿ ೪೫೦ ಕನ್ನಡ ಪದ್ಯಗಳೂ ೨೫೦ ಸಂಸ್ಕೃತ ಶ್ಲೋಕಗೂ ೪೮ ಅಂತರಾಳಿಕ ಕಥೆಗಳೂ ಇವೆ. ಪದ್ಯಗಳೆಲ್ಲವೂ ದುರ್ಗಸಿಂಹನಿಂದ ಸ್ವತಃ ರಚಿತವಾದವು. ಶ್ಲೋಕಗಳೆಲ್ಲ ಸಾಮಾನ್ಯವಾಗಿ ನೀತಿಶಾಸ್ತ್ರಗಳಿಂದ ಉದ್ಧೃತವಾದವು. ಈ ೨೫೦ ಶ್ಲೋಕಗಳಲ್ಲಿ ೧೦೦ ಶ್ಲೋಕಗಳು ಮಾತ್ರ ಇತರ ಪಂಚತಂತ್ರ ಗ್ರಂಥಗಳಲ್ಲಿ ಸಿಕ್ಕುತ್ತವೆಂದು ಡಾ॥ ಎ. ವೆಂಕಟಸುಬ್ಬಯ್ಯನವರು ಹೇಳಿದ್ದಾರೆ. ಉಳಿದವುಗಳ ಆಕರ ಯಾವುದೆಂಬುದು ಸ್ಪಷ್ಟವಾಗಿಲ್ಲ. ಕನ್ನಡ ಪದ್ಯ ಮತ್ತು ಸಂಸ್ಕೃತ ಶ್ಲೋಕಗಳಲ್ಲಿ ಸರ್ವಗ್ರಾಹ್ಯವಾದ ಅನೇಕ ಸುಭಾಷಿತಗಳು ಅಡಕವಾಗಿವೆ. ಕವಿಯು ಉದ್ದಾಮ ನೀತಿಶಾಸ್ತ್ರಜ್ಞನಾಗಿದ್ದನಲ್ಲದೆ ಪ್ರಾಚೀನ ನಯಶಾಸ್ತ್ರ ಪಂಡಿತರೆಲ್ಲರ ಪರಿಚಯವನ್ನು ಪಡೆದಿದ್ದನು.

ದುರ್ಗಸಿಂಹನ ಕೃತಿಯು ಚಂಪೂ ರೂಪದಲ್ಲಿದೆ. ಇದರಲ್ಲಿ ಪದ್ಯಗಳಿಗಿಂತ ಗದ್ಯಭಾಗವೇ ಹೆಚ್ಚು. ಎರಡೂ ಸುಲಭವೂ ಪ್ರೌಢವೂ ಆದ ಶೈಲಿಯಲ್ಲಿ ಬರೆಯಲ್ಪಟ್ಟಿವೆ. ಸಂಸ್ಕೃತ ಶಬ್ದಗಳ ಪ್ರಯೋಗ ವಿಶೇಷವಾಗಿದ್ದರೂ ದೀರ್ಘಸಂಸ್ಕೃತ ಸಮಾಸ ಪದಗಳ ಪ್ರಯೋಗವಿದ್ದರೂ ದೇಶೀಯ ವೈಭವವಿಲ್ಲದೆ ಇಲ್ಲ. ಕವಿಗೆ ಅಪ್ರಯೋಜಕವಾದ ವರ್ಣನೆಯಲ್ಲಿಯೂ, ಕವಿ ಸಮಯದಲ್ಲಿಯು ಕಾವ್ಯಾಂಗಗಳಾದ ನೀಯಾಂಶದ ಅಷ್ಟಾದಶ ವರ್ಣನೆಗಳಲ್ಲಿಯೂ ವಿಶೇಷ ಆಸಕ್ತಿ ಇಲ್ಲದಿದ್ದರೂ ವರ್ಣನೆ ಅವಶ್ಯಕತೆ ಬಿದ್ದಾಗ ಬಹು ಸ್ವಾರಸ್ಯವಾಗಿಯೂ ವೈಶಿಷ್ಟ್ಯಪೂರ್ಣವಾಗಿಯೂ ವರ್ಣಿಸುತ್ತಾನೆ. ಕಥನಕಲೆಯಲ್ಲಿ ಆತನಿಗೆ ವಿಶೇಷ ಪರಿಶ್ರಮವಿದೆ. ಅಪೂರ್ವವಾದ ಶುದ್ಧ ಪ್ರಯೋಗ ಮಾಡುವುದರಲ್ಲಿ ಅವನು ಬಹುನಿಪುಣ. ಪಶುಪಕ್ಷಿಗಳಿಗೆ ಅವನು ಕೊಟ್ಟಿರುವ ಹೆಸರುಗಳು ವಿಸ್ಮಯಾವಹವಾಗಿದ್ದರೂ, ಅನೇಕ ಸಲ ಅನ್ವರ್ಥವಾಗಿಯೇ ಇವೆ. ಸಾಧ್ಯವಾದಷ್ಟು ವೈವಿಧ್ಯವನು ತೋರಿಸುವುದಕ್ಕಾಗಿ ಒಂದೇ

ವೇಶದಲ್ಲಿ ವಿವಿಧ ಶಬ್ದಗಳಿಂದ ಸಂಬೋಧಿಸಲಾಗಿದೆ.

ರೂಪಕ, ಉತ್ಪ್ರೇಕ್ಷೆ, ದೃಷ್ಟಾಂತ, ಅರ್ಥಾಂತರ ನ್ಯಾಸಗಳು ಕೆಲವೆಡೆಗಳಲ್ಲಿ ಪ್ರಯೋಗವಾಗಿದ್ದರೂ ಕಲೆಗಾರನ ಬಲವೆಲ್ಲ ಉಪಮಾಲಂಕಾರಗಳ ಕಡೆಗೆ. ಅವೆಲ್ಲ ವಿವಿಧಕ್ಷೇತ್ರಗಳಿಗೆ ಸಂಬಂಧಪಟ್ಟು ಜೀವನಕ್ಕೆ ನಿಕಟ ಸಂಬಂಧವನ್ನು ಪಡೆದಿರುವುವಲ್ಲದೆ ವರ್ಣಿತ ವಿಷಯಗಳ–ಪೂರ್ಣ ಪರಿಚಯಕ್ಕೆ ಬಹು ಸಹಾಯಕವಾಗಿವೆ. ಅವು ನವೀನವಾಗಿಯೂ ಅರ್ಥಪೂರ್ಣವಾಗಿಯೂ ಇರುತ್ತವೆ. ಆ ಕ್ಷೇತ್ರದಲ್ಲಿ ಚರ್ವಿತ ಚರ್ವಣ ಇಲ್ಲದೆ ಇಲ್ಲ. ಆದರೂ ವ್ಯಕ್ತಿ ಮತ್ತು ಪ್ರಾಣಿ ಚಿತ್ರಗಳು ವಿಶೇಷ ವೈವಿಧ್ಯದಿಂದಲೂ ನಾವೀನ್ಯದಿಂದಲೂ ಕೂಡಿವೆ.

ದುರ್ಗಸಿಂಹನು ರಾಜನ ಗುಣಾವಗುಣಗಳು, ಅಮಾತ್ಯ ಲಕ್ಷಣ, ಶಕ್ತಿತ್ರಯ, ಚತುರೋಪಾಯ, ಪಂಚಾಂಗ, ಷಾಡ್ಗುಣ್ಯ, ಅರಿಷಡ್ವರ್ಗ, ಸಪ್ತವ್ಯಸನ, ಸಪ್ತಾಂಗ, ಅಷ್ಟದುರ್ಗ, ಷೋಡಶ–ಸಂಧಿ, ಮೂಲವ್ಯಸನ, ಪಟ್ಟಾಭಿಷೇಕ, ಮಂತ್ರಿ ಮಂಡಲ ಮೊದಲಾದುವುಗಳ ವಿವರಗಳನ್ನು ಕೊಟ್ಟಿದ್ದಾನೆ. ಹಾಗೆಯೇ ಸಂಸಾರ, ಸಂಸ್ಕೃತಿ, ನ್ಯಾಯ, ಧರ್ಮಯುದ್ಧ ಮಾರ್ಗ, ಸುಖಜೀವನ, ತ್ಯಾಜ್ಯಗುಣ, ಮಿತ್ರತ್ವ ಮೊದಲಾದುವುಗಳ ವಿವರಣೆಗಳನ್ನು ವಿಶದ ಪಡಿಸಿದ್ದಾನೆ.

ತನ್ನ ಕಾಲದ ಇತರ ಶಾಸ್ತ್ರಕಾರರಂತೆ ದುರ್ಗಸಿಂಹನು ತನ್ನ ಗ್ರಂಥದಲ್ಲಿ ವಿವಿಧ ಛಂದಸ್ಸುಗಳನ್ನು ಸಂಸ್ಕೃತ ಶ್ಲೋಕಗಳಲ್ಲಿ ೩೮ ಕಥೆಯ ಸಂದರ್ಭವನ್ನು ಸೂಚಿಸುವ ಕಥಾಸಂಗ್ರಹ ಶ್ಲೋಕಗಳು, ೧೯೩ ನೀತಿ ವಿಷಯಕವೂ ಆಗಿವೆ. ಅವನ ೪೫೦ ಕನ್ನಡ ಪದ್ಯಗಳಲ್ಲಿ ೩೦೪ ಕಂದಗಳು. ಉಳಿದವು ಸಮವೃತ್ತಗಳು. ಇವುಗಳಲ್ಲಿ ೧೪ ಷಟ್ಪದಿಗಳು, ೨ ಅಕ್ಕರ, ೧ಪಿರಿಯಕ್ಕರ, ಒಂದು ತ್ರಿಪದಿ, ಒಂದು ಪೃಥ್ವಿ, ರಥೋದ್ಧತ ೨, ಮಾಲಿನೀ ೧, ಉಜ್ವಲ ೧, ಹರಿಣಿ ೧, ಮದನನಾಯಕ ೧, ಧ್ರುತವಿಲಂಬಿತ ೧, ಉಳಿದ ೧೨೭ ಪ್ರಖ್ಯಾತ ೬ ಕನ್ನಡ ವೃತ್ತಗಳು. ದೇವತಾಸ್ತೋತ್ರವನ್ನು ಷಡ್ಪದಿ ಛಂದಸ್ಸಿನಲ್ಲಿ ರಚಿಸಿದ್ದಾನೆ. ಇದರ ಪ್ರತಿಯೊಂದು ಪಾದಲ್ಲಿಯೂ ೧೬ ಮಾತ್ರೆಗಳಿವೆ ೫, ೩, ೫, ೩ ಅಥವಾ ನಾಲ್ಕು ಮಾತ್ರೆಗಳ ನಾಲ್ಕುಗಣಗಳಿರುತ್ತವೆ ಎರಡೆರಡು ಚರಣಗಳಿಗೆ ಅತ್ಯಂತ ಪ್ರಾಸವಿದೆ. ಆದಿ ಪ್ರಾಸವಿಲ್ಲ, ಷಡ್ಪದಿಯು ರಗಳೆಗೆ ನಿಕಟ ವರ್ತಿಯಾಗಿದೆ.

ಒಟ್ಟಿನಲ್ಲಿ ಹೇಳುವುದಾದರೆ ದುರ್ಗಸಿಂಹನ ಪಂಚತಂತ್ರವು ವಸುಭಾಗಭಟ್ಟನ ಪರಂಪರೆಯ ಗ್ರಂಥಗಳಲ್ಲಿಯೂ ಪಂಚತಂತ್ರಸಾಹಿತ್ಯಚರಿತ್ರೆಯಲ್ಲಿಯೂ ಕನ್ನಡ ಸಾಹಿತ್ಯ ಪ್ರಪಂಚದಲ್ಲಿಯೂ ವಿಶೇಷ ಸ್ಥಾನವನ್ನು ಪಡೆಯಲರ್ಹವಾದ ಉತ್ತಮ ಗ್ರಂಥ.

*



(29ನೇ ಪುಟದಿಂದ)

ಲಲಾಟದಲ್ಲಿ ಪ್ರಕಾಶಿಸುತ್ತಿರಲು ಪಾಂಡುರಂಗನ ಪಟದ ಮುಂದೆ ನೃತ್ಯಮಾಡುವ ಸಂಪ್ರದಾಯವು ತಿರುಪತಿಯಲ್ಲಿ ಕಾಣುತ್ತವೆ. 40 ದಿನ ಕಾಲ ನಿಷ್ಠೆಯಿಂದ ಭಜಿಸುವುದು, 'ವಿಠಲ್ ವಿಠಲ್' ಎಂದು 'ಹೇ ಜ್ವಾಲ ನರಸಿಂಹ'ನೆಂದು ಅಗ್ನಿಗುಂಡದ ಪ್ರವೇಶ ಮಾಡುವುದೂ ಉಂಟು.

ಅನ್ನಮಯ್ಯನ ಸಂಕೀರ್ತನೆಗಳಲ್ಲಿ 'ಆದ್ಯ'ರ ಪ್ರಸ್ತಾವನೆ ಇದೆ. ಆದ್ಯರು 64 ಭಕ್ತರು. ಮತ್ತು ಅನ್ನಮಯ್ಯ 777 ಭಕ್ತರನ್ನು ಕುರಿತು ಹೇಳಿದ್ದಾನೆ. ಆ ಭಕ್ತರಲ್ಲಿ ಕನ್ನಡಿಗರು ಮಹಾರಾಷ್ಟ್ರರು ಇರಬಹುದು.

ತಿರುಮಲೆ ತಿರುಪತಿ ದೇವಸ್ಥಾನಕ್ಕೆ ಸೇರಿದ ನಮ್ಮಾಳ್ವಾರ್ ದೇವಸ್ಥಾನ ಪ್ರಾಂಗಣದಲ್ಲಿ ವಸ್ತುಸಂಗ್ರಹಾಲಯದಲ್ಲಿ ವಿಠಲನ ಶಿಲಾವಿಗ್ರಹವು ಕಾಣುತ್ತದೆ. ಬಹುಶಃ ಅದೇ ಪ್ರಾಚೀನಕಾಲದಲ್ಲಿ ಅಂಗರಂಗವೈಭವಗಳನ್ನು ಅನುಭವಿಸಿದ ಮೂರ್ತಿಯಾಗಿರಬಹುದು.

*

# ಗೃಹಲಕ್ಷ್ಮಿ

# ಶತರೂಪಾ

ಶತರೂಪಾಳು ಮಾನವ ಜನಾಂಗದ ಮೊಟ್ಟಮೊದಲ ತಾಯಿಯಾಗಿ, ಆದಿಮಾತೆಯಾಗಿದ್ದಾಳೆ. ಈಕೆಯು ಸ್ವಾಯಂಭು ಮನುವಿನ ಪತ್ನಿ. ಮನು ಮತ್ತು ಶತರೂಪಾರವರುಗಳಿಂದಲೆ ಮಾನವ ಸೃಷ್ಟಿಯು ಆರಂಭವಾಯಿತು. 'ತತೋ ಮನು ಸ್ವಾಅಜಾಯಂತಾಃ' ಎಂದು ಶೃತಿಯು ಹೇಳುತ್ತದೆ.

ಮನು ಮತ್ತು ಶತರೂಪಾ ಇವರಿಬ್ಬರು ಬ್ರಹ್ಮನ ಶರೀರದಿಂದ ಹುಟ್ಟಿದವರು. ಆವನ ಎಡಭಾಗದಿಂದ ಮನು ಮತ್ತು ಬಲ ಭಾಗದಿಂದ ಶತರೂಪಾರವರುಗಳು ಪ್ರಾದುರ್ಭಾವಗೊಂಡರು. ಕೇವಲ ಮಾನವನೇ ಅಲ್ಲ, ನೂರಾರು ಸಾವಿರಾರು ಪ್ರಾಣಿಗಳೂ ಕೂಡ ಇವರಿಬ್ಬರುಗಳ ಸಂತಾನವಾಗಿದೆ-ಎಂದು ಬೃಹದಾರಣ್ಯಕ ಉಪನಿಷತ್ತು ಹೇಳುತ್ತದೆ.

ಶತರೂಪಾಳು ಬಹಳ ಮುಗ್ಧ ಸ್ವಭಾವದ, ಲಜ್ಜೆಯನ್ನು ಹೊಂದಿದ್ದ ಹೆಣ್ಣಾಗಿದ್ದಳು. ಮುಂದೆ ಜಗತ್ತಿನಲ್ಲಿ ಹೆಣ್ಣು ಎಂಬುವಳು ಹೀಗೆಯೇ ಇರಬೇಕು ಎನ್ನುವುದನ್ನು ತೋರಿಸಿಕೊಟ್ಟಳು.

ಶತರೂಪಾಳು ತನ್ನ ಇಷ್ಟದಂತೆ ಯಾವ ರೂಪವನ್ನು ಬೇಕಾದರು ಪಡೆಯುವವಳಾಗಿದ್ದಳು. ಮನುವನ್ನು ಸಂಧಿಸಬೇಕಾದ ಪ್ರಥಮ ಸಮಾಗಮದ ಸಮಯದಲ್ಲಿ ಆಕೆಯು ನೂರಾರು ರೂಪಗಳನ್ನು ಧರಿಸಿದಳು. ಈ ರೀತಿಯಲ್ಲಿ ಆಕೆ ಮನುವಿನ ದೃಷ್ಟಿಯಿಂದ ಬಚ್ಚಿಟ್ಟುಕೊಳ್ಳಲು ಪ್ರಯತ್ನಿಸಿದಳು. ಆದರೆ ಮನುವು ಆವಳನ್ನು ಎಲ್ಲ ರೂಪಗಳಲ್ಲಿಯೂ ಕಂಡುಹಿಡಿದು, ಆವಳು ಯಾವ ರೂಪವನ್ನು ಪಡೆಯುವಳೊ ಅದೇ ರೂಪವನ್ನು ತಾನೂ ಪಡೆದು ಅವಳನ್ನು ಸಂಧಿಸಿದನು.

ಈ ರೀತಿಯಲ್ಲಿ ನೂರಾರು ರೂಪಗಳನ್ನು ಧರಿಸಿದ ಕಾರಣದಿಂದಲೆ ಈಕೆಯ ಹೆಸರು ಶತರೂಪಾ ಎಂದಾಗಿರಬೇಕು.

ಯಾವ ಯಾವ ಪ್ರಾಣಿಗಳ ರೂಪವನ್ನು ಈಕೆಯು ಧರಿಸಿದಳೊ, ಆ ಎಲ್ಲರೂಪಗಳಲ್ಲಿಯು ತನ್ನ ಒಂದೊಂದು ಸಂತಾನವನ್ನು ಬಿಟ್ಟಳು. ತಾನು ನೀಡಿದ ರೂಪಗಳುಳ್ಳ ಪ್ರಾಣಿಗಳ ಮೇಲೆ ದಯೆ, ಅನುಕಂಪ, ಕರುಣೆಗಳನ್ನು ತೋರಿ ಮಾನವ ಸ್ತ್ರೀಯು ಪಶುಗಳನ್ನು ಹೇಗೆ ನೋಡಿಕೊಳ್ಳಬೇಕೆಂಬುದನ್ನು ಸ್ವತಃ ತೋರಿಸಿ ಕೊಟ್ಟಳು. ಇದೇ ಪ್ರಾಣಿ ಸೃಷ್ಟಿಯ ಮೂಲ ಸ್ರೋತವಾಯಿತು.

ಸ್ವಾಯಂಭುವ ಮನುವು ಬ್ರಹ್ಮಾವರ್ತದ ರಾಜನಾದನು. ಸಕಲ ಸಂಪನ್ಮೂಲಗಳಿಂದ ಕೂಡಿದ ಬರ್ಹಿಷ್ಮತೀ ನಗರವು ಈತನ ರಾಜಧಾನಿಯಾಗಿದ್ದಿತು. ವರಾಹಸ್ವಾಮಿಯು ಭೂಮಿಯನ್ನು ರಸಾತಲದಿಂದ ಮೇಲೆತ್ತಿ ತಂದ ಮೇಲೆ ಆತನ ಶರೀರದಿಂದ ರೋಮವು ಕಿತ್ತು ಬಂದು ಭೂಮಿಯ ಮೇಲೆ ಬಿದ್ದಿತು. ಇದೇ ಮುಂದೆ ಬೆಳೆದು ಕುಶ ಕಾಶಗಳಾದುವು. ಈ ಕುಶ ಮತ್ತು ಕಾಶಗಳನ್ನೇ ಮುನಿಗಣವು ಯಜ್ಞಗಳು ಅಡ್ಡಿ ಉಂಟುಮಾಡುವ ದೈತ್ಯರನ್ನು ಓಡಿಸಲು, ಯಜ್ಞ ಪುರುಷನನ್ನು ಆರಾಧಿಸಲು ಸಾಧನವನ್ನಾಗಿ ಉಪಯೋಗಿಸುತ್ತಿದ್ದರು. ಇದೇ ಕುಶವನ್ನು 'ಬರ್ಹಿಷ್' ಎಂದು ಕರೆಯುತ್ತಾರೆ. ಇದು ಮೊದಲಿಗೆ ಕಂಡು ಬಂದುದೆ ಅಲ್ಲದೆ ಬಹಳ ಹೆಚ್ಚಾಗಿರುವ ಕಾರಣದಿಂದಲೇ ಸ್ವಾಯಂಭುವಮನುವಿನ ನಗರಕ್ಕೆ 'ಬರ್ಹಿಷ್ಮತೀ' ನಗರ ಎಂಬ ಹೆಸರು ಬಂದಿತು. ಇದೇ ನಗರದಲ್ಲಿಯೆ ಶತರೂಪಾಳು ತನ್ನಪತಿ ಮನುವಿನೊಂದಿಗೆ ವಾಸಿಸುತ್ತಿದ್ದಳು.

ಶತರೂಪಾಳು ಪತ್ನೀಧರ್ಮವನ್ನು ಉತ್ತಮ ರೀತಿಯಲ್ಲಿ ಅನುಷ್ಠಾನ ಮಾಡುತ್ತಿದ್ದಳು. ಗಂಡನನ್ನು ಪ್ರೇಮಪುರಸ್ಸರವಾಗಿ ನೋಡಿಕೊಳ್ಳುತ್ತಿದ್ದುದೇ ಅಲ್ಲದೆ ತನ್ನ ನಗರ, ತನ್ನ ಪ್ರಜೆಗಳು, ಪಶುಸಂಪತ್ತು ವೃಕ್ಷಸಂಪತ್ತನ್ನೂ - ಆದರದಿಂದ ನೋಡಿಕೊಳ್ಳುವಳು. ಅವರುಗಳಿಗೆ ಸ್ವಂತತಾಯಿ



ಯಂತೆಯೇ ಇದ್ದಳು. ಪ್ರತಿದಿನ ಪ್ರೇಮಪೂರ್ಣ ಹೃದಯದಿಂದ ಭಗವಂತನ ಪುಣ್ಯ ಕಥೆಗಳನ್ನು ಹೇಳುವುದು, ಅವನ ನಾಮ ಸಂಕೀರ್ತನೆಗಳನ್ನು ಮಾಡುವುದು, ಪೂಜಾ ಪಾಠಗಳನ್ನು ಅನುಸರಿಸುವುದು – ಇತ್ಯಾದಿ ಕಾರ್ಯಗಳನ್ನು ಮಾಡುವಳು. ಹೆಣ್ಣು ದಿನವನ್ನು ಹೇಗೆ ಕಳೆಯಬೇಕು, ಸನ್ಮಾರ್ಗದಲ್ಲಿ ಹೇಗೆ ವರ್ತಿಸಬೇಕೆಂಬುದಕ್ಕೆ ಆದರ್ಶಪ್ರಾಯಳಾದಳು. ತನ್ನ ಪತಿಯೊಡಗೂಡಿ ಸದ್ಧರ್ಮ ಪರಿಪಾಲನೆಯನ್ನು ಮಾಡಿದಳು. ಇಂದಿಗೂ ವೇದಗಳು ಈಕೆಯನ್ನು ಗೌರವಿಸುತ್ತಿವೆ.

ಮನು ಮತ್ತು ಶತರೂಪಾರವರಿಗೆ ಇಬ್ಬರು ಪುತ್ರರು ಮತ್ತು ಮೂರು ಜನ ಪುತ್ರಿಯರು ಇದ್ದರು. ಪುತ್ರರ ಹೆಸರು ಉತ್ತಾನಪಾದ ಮತ್ತು ಪ್ರಿಯವ್ರತ ಎಂದಿತ್ತು. ಪುತ್ರಿಯರ ಹೆಸರು ಆರೂತಿ, ಪ್ರಸೂತಿ ಮತ್ತು ದೇವಹೂತಿ ಎಂದಾಗಿತ್ತು.

ಉತ್ತಾನಪಾದನ ಮಗನೇ ಪ್ರಸಿದ್ಧ ಭಕ್ತನಾದ ಧ್ರುವನು. ಮನುವಿನ ಎರಡನೆ ಮಗನಾದ ಪ್ರಿಯವ್ರತನು ಈ ಭೂಮಂಡಲ

'ರಘುಸುತ'

ವಿಭಜಿಸಿ, ಉತ್ತಮ ರಾಜ್ಯವ್ಯವಸ್ಥೆಯನ್ನು ರೂಪಗೊಳಿಸಿದನು.

ಪುತ್ರಿಯರಲ್ಲಿ ಮೊದಲನೆಯವಳಾದ ಆರೂತಿಯು 'ರುಚಿ ಪ್ರಜಾಪತಿ' ಯನ್ನು ವಿವಾಹವಾದಳು. ಎರಡನೆಯವಳಾದ ಪ್ರಸೂತಿಯು ದಕ್ಷ ಪ್ರಜಾಪತಿಯನ್ನು ಮದುವೆಯಾದಳು. ಸ್ವಾಯಂಭುವ ಮನ್ವಂತರದ ಈ ದಕ್ಷನು ಪ್ರಸೂತಿಯಲ್ಲಿ 24 ಹೆಣ್ಣು ಮಕ್ಕಳನ್ನು ಪಡೆದು ಮುಂದೆ ಋಷಿ ಸಂತಾನಕ್ಕೆ ಕಾರಣನಾದನು. ಅಲ್ಲದೆ ಮೈಥುನ ಧರ್ಮದಿಂದ ಸಂತಾನಾಭಿವೃದ್ಧಿಯಾಗುವಂತೆಯೂ ನಿಯಮಿಸಿದ. ಮೂರನೆಯ ಮಗಳಾದ ದೇವಹೂತಿಯು ಕರ್ದಮ ಮಹರ್ಷಿಯನ್ನು ಮದುವೆಯಾದಳು. ಋಷಿಯು ಅವತರಿಸಿದನು.

ಈ ಹೆಣ್ಣು ಮಕ್ಕಳು ತಮ್ಮ ಗಂಡಂದಿರ ಮನೆಯಲ್ಲಿ ಹೇಗೆ ಇರಬೇಕು, ಹೇಗೆ ವರ್ತಿಸಬೇಕು ಎಂಬುದನ್ನು ಶತರೂಪಾಳು ತನ್ನ ಮಕ್ಕಳಿಗೆ ಉಪದೇಶಿದಳು. ಗಂಡನ ಮನೆಯಲ್ಲಿ ಹೆಣ್ಣು ಮಕ್ಕಳು ಮಾಡಬೇಕಾದ ಕರ್ತವ್ಯ ಪಾಲನೆ, ನಿಯಮ ನಿಷ್ಠೆ-ಇತ್ಯಾದಿ ನೀತಿ ಸಂಹಿತೆಯನ್ನು ಈಕೆ ರೂಪಿಸಿದಳು.

ಮನುವು ಬಹಳ ಕಾಲದವರೆಗೆ ರಾಜ್ಯಭಾರ ಮಾಡಿದ. ಉತ್ತಮರೀತಿಯಲ್ಲಿ ಪ್ರಜಾಪಾಲನೆ ಮಾಡಿದ. ಭಗವಂತನ ನಿಯಮಗಳಿಗೆ ಅನುಸಾರವಾಗಿ, ಶಾಸ್ತ್ರಾರ್ಥ ರೀತಿಯಲ್ಲಿ ನಡೆದು ಕೊಳ್ಳಲು ಶತರೂಪೆಯು ಗಳನ್ನು ನೀಡಿದಳು.

ಎಷ್ಟುವರ್ಷಗಳು ರಾಜ್ಯಭಾರ ಮಾಡಿದರೂ, ವೈರಾಗ್ಯವೆಂಬುದು ಉದಯಿಸಲೇ ಇಲ್ಲ. ಇದನ್ನು ಗಮನಿಸಿದ ಶತರೂಪಾಳು ತನ್ನ ಗಂಡನಿಗೆ ಇದರ ಬಗ್ಗೆ ಎಚ್ಚರಿಸಿದಳು. ಇದರ ಪರಿಣಾಮವಾಗಿ ಅವನಿಗೆ ತನ್ನ ತಪ್ಪಿನ ಅರಿವಾಯಿತು, 'ದೇವಿ! ನಮ್ಮ ಇದುವರೆವಿಗಿನ ಜೀವನವು ಪರಮಾತ್ಮನ ಪೂರ್ಣರೂಪದ ಧ್ಯಾನಮಾಡದೆ ವ್ಯರ್ಥವಾಯಿತಲ್ಲ! 'ಎಂದು ಪಶ್ಚಾತ್ತಾಪಗೊಂಡನು.

ಕಡೆಗೆ ತನ್ನಮಗ ಉತ್ತಾನಪಾದನನ್ನು ಬಲವಂತವಾಗಿ ಸಿಂಹಾಸನದ ಮೇಲೆ ಕೂಡಿಸಿ, ತಾನು ಶತರೂಪಾಳ ಜೊತೆಯಲ್ಲಿ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಲು ಕಾಡಿಗೆ ತೆರಳಿದನು.

ಈ ದಂಪತಿಗಳು ಸಹಸ್ರಾರು ವರ್ಷಗಳವರಿಗೆ ಕಠಿಣ ತಪಸ್ಸು ಮಾಡಿ ಪರಮಾತ್ಮನನ್ನು ಒಲಿಸಿಕೊಂಡರು. ಆಗ ಭಗವಂತನು ಪ್ರತ್ಯಕ್ಷನಾಗಿ ಅವರಿಗೆ ದರ್ಶನ ನೀಡಿದನು. ಅವನ ಮನೋಹರಸುಂದರರೂಪ ಲೀಲಾಮೋಹನದೃಷ್ಟಿ, ಮಣಿಮಯ ಆಭೂಷಣ ಆಭರಣಗಳ ಶೋಭೆಯನ್ನು ವೀಕ್ಷಿಸಿ ಪುನೀತರಾದೆವೆಂದುಕೊಂಡರು ಆ ದಂಪತಿಗಳು.

ಪರಮಾತ್ಮನ ಈ ರೂಪ ಮಾಧುರ್ಯದಿಂದ ಆನಂದ ತುಂದಿಲರಾದ ಆ ದಂಪತಿಗಳು ಅವನ ಚರಣಗಳನ್ನು ಸ್ಪರ್ಶಿಸಿ ಮೇಲೆದ್ದರು.

ಅವರ ತಪಸ್ಸಿನಿಂದ ಸುಪ್ರೀತನಾದ ಪರಮಾತ್ಮನು ಅವರಿಗೆ ವರವನ್ನು ಕೇಳಿಕೊಳ್ಳುವಂತೆ ಅನುಗ್ರಹಿಸಿದನು. ಇದನ್ನು ಆಲಿಸಿದ ಮನುವು ಹೇಳಿದನು.

"ಹೇ ಪ್ರಾಣದಾತನೆ! ನಿನ್ನ ದರ್ಶನ ಮಾತ್ರದಿಂದಲೆ ನಮ್ಮೆಲ್ಲ ಅಭಿಲಾಷೆಗಳೂ ಪೂರ್ಣಗೊಂಡವು. ಆದರೆ ನನ್ನ ಹೃದಯದಲ್ಲಿ ಒಂದೇ ಒಂದು ಆಸೆಯು ಉಳಿದಿದೆ".

" ಏನದು ಹೇಳು? "

## ಅನ್ನದಾನ ಯೋಜನೆ ವಿವರಗಳು

"ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ" ಎನ್ನುವ ಹೊಸ ಯೋಜನೆಯಲ್ಲಿ ತಿರುಮಲೆಗೆ ಬರುವ ಯಾತ್ರಿಕರಿಗಾಗಿ ಉಚಿತ ಭೋಜನ ನೀಡುವ ಕಾರ್ಯವನ್ನು ತಿ. ತಿ. ದೇ. ಆರಂಭಿಸಿದೆ. ಈ ಯೋಜನೆಯ ವಿವರಗಳು ಈ ರೀತಿ ಇವೆ-ಯಾವ ಭಕ್ತರೇ ಆಗಲಿ ಹತ್ತು ಲಕ್ಷ ರೂ ಗಳನ್ನು ದಾನ ನೀಡಿದಲ್ಲಿ ಅದಕ್ಕೆ ಸಮನಾದ ಅನುದಾನವನ್ನು ತಿ. ತಿ. ದೇ. ಗಳೂ ನೀಡಿ ಒಂದು ದತ್ತಿಯನ್ನು ಸ್ಥಾಪಿಸಿ, ಅದರ ವಾರ್ಷಿಕಬಡ್ಡಿ ಉತ್ಪನ್ನದಿಂದ ದಿನವೂ ಐದುನೂರು ಮಂದಿಗೆ ಉಚಿತ ಭೋಜನ ನೀಡಲಾಗುವುದು. ಈ ದಾನವು ಆದಾಯಕರ ಶಾಸನದ ಯು/ಎಸ್ 80 (ಜಿ) ಕಲಮಿನಂತೆ ಆದಾಯಕರ ವಿಮುಕ್ತವಾಗಿರುವುದು.

ದಾನಿಯ ಹೆಸರನ್ನು ಊಟದ ಕೊಠಡಿಯಲ್ಲಿ ಎದ್ದು ಕಾಣುವಂತೆ ಕಪ್ಪು ಹಲಗೆಯ ಮೇಲೆ ಬರೆಯಲಾಗುವುದು. ಹಾಗೂ ಉಚಿತ ಭೋಜನದ ಚೀಟಿಗಳ ಮೇಲೂ ಮುದ್ರಿಸಲಾಗುವುದು. ಜೊತೆಗೆ ವರ್ಷಕ್ಕೊಮ್ಮೆ ಮೂರು ದಿನಗಳ ಕಾಲ ದಾನಿ ಮತ್ತು ಅವರ ಕುಟುಂಬಕ್ಕೆ ತಿರುಮಲೆಯಲ್ಲಿ ಉಚಿತ ವಸತಿ ಹಾಗೂ ಮೂರು ದಿನವೂ ದೇವಾಲಯದಲ್ಲಿ ಆರತಿಯೊಡನೆ ದರ್ಶನಾವಕಾಶವನ್ನು ಏರ್ಪಡಿಸಲಾಗುವುದು.

ದೇಶದೊಳಗಿನ ಹಾಗೂ ವಿದೇಶಗಳ ಎಲ್ಲಾ ಮಾನವಸೇವಾ ಪ್ರೇಮಿ ಭಕ್ತರೂ ತಿ.ತಿ.ದೇ. ಗಳ ಈ ಯೋಜನೆಗೆ ಉದಾರವಾಗಿ ದಾನ ನೀಡುವುದರಿಂದ ಅತಿ ಹೆಚ್ಚು ಮಂದಿ ಯಾತ್ರಿಕರಿಗೆ ಭೋಜನಾವಕಾಶವುಂಟುಮಾಡಿ, ಅವರು ತಿರುಮಲೆಯಲ್ಲಿ ಅಶನ ಚಿಂತಾತುರರಾಗುವುದನ್ನು ತಪ್ಪಿಸಬೇಕೆಂದು ಈ ಮೂಲಕ ಬೇಡಲಾಗಿದೆ.

**ತಿ.ತಿ.ದೇ.**

"ನಿನ್ನ ಸಮಾನನಾದ ಓರ್ವಪುತ್ರನು ನನ್ನಲ್ಲಿ ಜನಿಸಬೇಕು ಅಷ್ಟೆ ನನಗೆ ಬೇರೇನು ಆಸೆಯಿಲ್ಲ"

"ನಿನ್ನ ಬೇಡಿಕೆ ಈಡೇರುವುದು.ನನ್ನಂತಹ ಮಗನನ್ನು ನಿನಗೆ ಎಲ್ಲಿಂದ ಹುಡುಕಿ ತರುವುದು ?ಅದು ಸಾಧ್ಯವಿಲ್ಲದ ಮಾತು. ಆದರಿಂದ ನಾನೆ ನಿನ್ನ ಮಗನಾಗಿ ನಿನ್ನಲ್ಲಿ ಅವತರಿಸುವೆನು.

ನಂತರ ಪರಮಾತ್ಮನು ಶತರೂಪಾಳ ಕಡೆ ತಿರುಗಿ, "ದೇವಿ, ನಿನ್ನ ಇಷ್ಟಕ್ಕೆ ತಕ್ಕಂತಹ ವರವೊಂದನ್ನು ಕೇಳು" ಎಂದು ಕರುಣಿಸಿದನು.

"ಪ್ರಭೂ !ನನ್ನ ಪತಿದೇವನು ಕೇಳಿರುವ ವರವೇ ನನಗು ಪ್ರಿಯವಾದುದು. ಆದರೂ ಈ ಒಂದು ವರವನ್ನು ಕೇಳಲು ಇಚ್ಛಿಸುತ್ತೇನೆ."

"ಕೇಳು"

"ನಾನು ನನ್ನ ಪತಿಯೊಂದಿಗೆ ಸುಖ ಜೀವನ ನಡೆಸಿದಂತೆ ಮುಂದೆ ಭವಿಷ್ಯದಲ್ಲಿ ಪ್ರತಿ ಪತಿವ್ರತೆಯೂ ನನ್ನಂತೆಯೆ ತನ್ನ ಪತಿಯೊಂದಿಗೆ ಸುಖಜೀವನ ನಡೆಸುವಂತೆ ಮಾಡು. ಪತಿಯ ಪಾದಾರವಿಂದಗಳಿಂದ ಅಂತಹವರು ದೂರವಿರದಂತೆ ಮಾಡು. ಅವರುಗಳಿಗೆ ಪತಿಯಸುಖ, ಸಂತಾನ ಸೌಭಾಗ್ಯ ಸದಾ ಇರುವಂತೆ ಕರುಣಿಸು. ಬುದ್ಧಿವಂತ ಹೆಣ್ಣಿನಲ್ಲಿ ಸದಾಕಾಲದಲ್ಲೂ ಸದಸದ್ವಿವೇಕ ನೆಲೆಸಿರುವಂತೆ ಅನುಗ್ರಹಿಸು. ನಿನ್ನಮೇಲೆ ಸದಾ ಮನಸ್ಸಿರುವಂತೆ ಕರುಣಿಸು. "ಎಂದು ಬೇಡಿ ತಲೆಬಾಗಿದಳು.

ತನಗಾಗಿಯಲ್ಲದೆ ಬೇರೆಯವರಿಗಾಗಿ ಬೇಡಿದ ಇಂತಹ ಮಾತೆಯ ಬೇಡಿಕೆಯನ್ನು ಪರಮಾತ್ಮನು ತಾನೆ ಹೇಗೆ ಬೇಡವೆಂದಾನು! ಪ್ರತಿಯೊಬ್ಬ ಮಾತೆಯ ಕರ್ತವ್ಯವೂ ಇದರಲ್ಲಿ ಅಡಗಿರುವುದರಿಂದ ಪರಮಾತ್ಮನು ಈ ವರಕ್ಕೆ ತಥಾಸ್ತು ಎಂದು ಅನುಗ್ರಹಿಸಿ, "ನಿನ್ನ ಮನಸ್ಸಿನಲ್ಲಿರುವುದೆಲ್ಲ ಅನುಗ್ರಹಿಸಿದ್ದೇನೆ" ಎಂದು ಹೇಳಿ, ಆಕೆಯನ್ನು ತನ್ನ ತಾಯಿಯನ್ನಾಗಿ ಸ್ವೀಕರಿಸಿದ.

ಈ ರೀತಿಯಲ್ಲಿ ಮಾತೆಯ ವಿಶಾಲ ಹೃದಯ ಪ್ರಸ್ಫುಟಿತವಾಯಿತು. ತಾಯಿಯಾದವಳು ನಿಜ ಅರ್ಥದಲ್ಲಿ ತನಗಾಗಿ ಅಲ್ಲದೆ ಬೇರೆಯವರಿಗಾಗಿ ಹೇಗೆ ಜೀವಿಸಬೇಕು, ತನ್ನ ಜೀವನವನ್ನು ಹೇಗೆ ಸಾರ್ಥಕಪಡಿಸಿಕೊಳ್ಳಬೇಕು- ಎಂದು ಶತರೂಪಾಳು ತನ್ನ ಜೀವನವನ್ನೆ ಉದಾಹರಣೆಯನ್ನಾಗಿ ಮಾಡಿ, ತೋರಿಸಿದಳು.

ಭೂಮಂಡಲದ ಮೇಲಿನ ಸ್ತ್ರೀಜನಾಂಗಕ್ಕೆ ಈ ರೀತಿಯಲ್ಲಿ ಶತರೂಪಾಳು ಆದರ್ಶಪ್ರಾಯಳಾದಳು. ತನ್ನ ಅಲೌಕಿಕ ಶ್ರದ್ಧಾಭಕ್ತಿಗಳು ಹಾಗೂ ತಪಸ್ಸುಗಳಿಂದ ಭಗವಂತನನ್ನು ಮಗನನ್ನಾಗಿ ಪಡೆದಳು.

ಪರಮಾತ್ಮನ ಆಜ್ಞೆಯಂತೆ ಕೆಲವು ಕಾಲದವರಿಗೆ ಈ ದಂಪತಿಗಳು ಇಂದ್ರಲೋಕದಲ್ಲಿದ್ದರು. ನಂತರ ಮನುವು ಅಯೋಧ್ಯೆಯ ಚಕ್ರವರ್ತಿ ದಶರಥನಾದನು, ಶತರೂಪಾಳು ಅವನ ಪ್ರಥಮ ಪತ್ನಿ ಕೌಸಲ್ಯೆಯಾಗಿ, ಪರಮಾತ್ಮನ ಅಂಶವಾದ ಶ್ರೀರಾಮನಿಗೆ ಜನ್ಮ ನೀಡಿದಳು.

ಈ ರೀತಿ ಶತರೂಪಾಳು ಜಗತ್‌ಕಲ್ಯಾಣಕ್ಕಾಗಿ ದುಡಿದ ಜಗತ್ತಿನ ಪ್ರಥಮ ಮಹಿಳೆಯಾದಳು. ಮಾತೆಯ ಮಮತೆ, ಪತ್ನಿಯ ಕರ್ತವ್ಯಗಳ ಪ್ರತಿರೂಪವಾದಳು. ●

---

(6ನೇ ಪುಟದಿಂದ)

ಸುರೂಪಾಂ ಪ್ರತಿಮಾಂ ವಿಷ್ಣೋಃ  
ಪ್ರಸನ್ನವದನೇಕ್ಷಣಾಂ।  
ಕೃತ್ವಾತ್ಮನಃ ಪ್ರೀತಿಕರೀಂ  
ಸುವರ್ಣರಜತಾದಿಭಿಃ।  
ತಾಮರ್ಚಯೇತ್ತಾಂ ಪ್ರಣಮೇತ್ತಾಂ  
ಭಜೇತ್ತಾಂ ವಿಚಿಂತಯೇತ್  
......................  
ತಾಮೇವ ಬ್ರಹ್ಮರೂಪಿಣಂ ॥

ಸುಂದರವಾದ ರೂಪ, ಪ್ರಸನ್ನವಾದ ಮುಖ, ಕಣ್ಣು, ಮನಸ್ಸಿಗೆ ಆನಂದಕರವಾಗಿ ಆಕರ್ಷಯುತವಾಗಿ ಪ್ರೀತಿಕರವಾದ ಪ್ರತಿಮೆಯನ್ನು, ಚಿನ್ನ, ಬೆಳ್ಳಿ, ತಾಮ್ರ, ಹಿತ್ತಾಳೆ, ಕಂಚು ಮುಂತಾದ ಯಾವುದಾದರೂ ಒಂದು ಲೋಹದಿಂದ ಅಥವ ಶಿಲೆ, ದಾರು, ಮೃತ್ತಿಕೆ–ಇತ್ಯಾದಿ ಒಂದರಿಂದ ನಿರ್ಮಾಣಮಾಡಿ ಶಾಸ್ತ್ರೀಯ ಪ್ರತಿಷ್ಠಾವಿಧಿಯಿಂದ ಅದರಲ್ಲಿ ಭಗವಂತನ ಸಾನ್ನಿಧ್ಯವನ್ನು ಪ್ರಾರ್ಥಿಸಿ, ಅಂತಹ ದಿವ್ಯ ಪ್ರತಿಮೆಯನ್ನು ದಿವ್ಯವಾಗಿ ಅಲಂಕರಿಸಿ ಪೂಜಿಸಬೇಕು, ನಮಸ್ಕರಿಸಬೇಕು, ಭಜಿಸಬೇಕು ಮತ್ತು ಸದಾ ಧ್ಯಾನಿಸುತ್ತಿರಬೇಕು. ಯಾರು ಹೀಗೆ ಅರ್ಚಾಮೂರ್ತಿಯನ್ನು ಆರಾಧಿಸುವರೋ ಅಂತಹವರು ಶರೀರಾವಸಾನಕಾಲದಲ್ಲಿ ಸರ್ವಕರ್ಮಬಾಧೆಯಿಂದ ವಿಮುಕ್ತರಾಗಿ ಸಂಪೂರ್ಣ ಬ್ರಹ್ಮಾನಂದ ಪಡೆಯುವರು.

ಪರತ್ವಾವಸ್ಥೆಯಲ್ಲಿ ತನ್ನನ್ನು ಸ್ವಾಮಿಯನ್ನಾಗಿ, ಜೀವಾತ್ಮನನ್ನು ತನ್ನ ಸ್ವತ್ತನ್ನಾಗಿ ವ್ಯವಸ್ಥೆ ಮಾಡಿಕೊಂಡಿರುವ ಪರಮಾತ್ಮನು ಅರ್ಚಾರೂಪದಲ್ಲಿ ತನ್ನನ್ನು ಸ್ವತ್ತನ್ನಾಗಿಯೂ ಜೀವನನ್ನು ಸ್ವಾಮಿಯನ್ನಾಗಿಯೂ ಭಾವಿಸಿ, ಜೀವನನ್ನು ಮುಕ್ತನನ್ನಾಗಿ ಮಾಡುವನು.

ಸರ್ವಜ್ಞನಾಗಿ, ಸರ್ವಶಕ್ತನಾಗಿ, ಸರ್ವಸ್ವತಂತ್ರನಾಗಿರುವ ಪರಮಾತ್ಮನು, ಅರ್ಚಾರೂಪದಲ್ಲಿ, ಅಜ್ಞನಂತೆ, ಅಶಕ್ತನಂತೆ ಪರತಂತ್ರನಂತೆ ನಟಿಸುತ್ತ, ವಿಮುಖನಾಗಿರುವ ಚೇತನನನ್ನು ತನ್ನ ಅಪಾರ ಕಾರುಣ್ಯಕ್ಕೆ ಒಳಪಡಿಸಿ, ಐಹಿಕ ಸಂಪತ್ತನ್ನು ಅನುಗ್ರಹಿಸಿ ಮೋಕ್ಷ ಸಾಮ್ರಾಜ್ಯ ಪರ್ಯಂತ ಚೇತನರ ಅಧಿಕಾರಕ್ಕೆ ತಕ್ಕಂತೆ, ಅವರ ಮನೋರಥಗಳನ್ನು ಪೂರ್ಣಗೊಳಿಸುವನು. ಹೀಗೆ ಪರಮಾತ್ಮನ ಪಂಚರೂಪಗಳಲ್ಲಿ ಅರ್ಚಾರೂಪವು, ಸ್ವಾಮಿಯ ಸೌಲಭ್ಯಕ್ಕೆ ಸೀಮಾಭೂಮಿಯಾಗಿ ಚೇತನರಿಗೆ ಆಶ್ರಯಭೂತವಾಗಿಯೂ ಆದರ್ಶಪ್ರಾಯವಾಗಿಯೂ ಆಗಿದೆ.

ದಕ್ಷಿಣಭಾರತದಲ್ಲಿ ಇಂತಹ ಅರ್ಚಾರೂಪದ ನೂರೆಂಟು ವೈಷ್ಣವದೇವಾಲಯಗಳಿವೆ. ಅವುಗಳಲ್ಲಿ ಅತಿಪ್ರಸಿದ್ಧವಾದ, ಅತಿಜನಪ್ರಿಯವಾದ ತಿರುಮಲೆ ತಿರುಪತಿ ವೆಂಕಟೇಶ್ವರಸ್ವಾಮಿ, ಕಾಂಚೀಪುರದ ವರದರಾಜಸ್ವಾಮಿ, ಶ್ರೀರಂಗದ ಶ್ರೀ ರಂಗನಾಥಸ್ವಾಮಿ, ತಿರುನಾರಾಯಣಪುರದ ಚೆಲುವ ನಾರಾಯಣಸ್ವಾಮಿ ದೇವಾಲಯಗಳು, ಅತಿಮನೋಹರವಾಗಿವೆ. ಇಲ್ಲಿ ನಡೆಯುವ ಅರ್ಚಾರೂಪದ ಪರಮಾತ್ಮನ, ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವ, ಸಂವತ್ಸರೋತ್ಸವಗಳನ್ನು ಲಕ್ಷಾಂತರ ಭಕ್ತರು, ದರ್ಶನಮಾಡಿ ಆನಂದಪಡೆದು, ಶ್ರೀ ವೈಕುಂಠದಲ್ಲಿ ನಡೆಯುವ ಉತ್ಸವದಂತೆ ಎಂದು ಭಾವಿಸಿ, ಕೃತಕೃತ್ಯರಾಗುತ್ತಿದ್ದಾರೆ. ಇಂತಹ ಮುಕ್ತಿದಾಯಕ ಅವಕಾಶವು ಪರಮಾತ್ಮನ ಪಂಚರೂಪದಲ್ಲಿ ಒಂದಾದ ಅರ್ಚಾರೂಪದಲ್ಲಿ ಮಾತ್ರ ದೊರೆಯುವುದು.

ಶ್ರೀರಂಗ ಮಂಗಳ ಮಣಿಂ  
ಕರುಣಾನಿವಾಸಂ।  
ಶ್ರೀ ವೇಂಕಟಾದ್ರಿ ಶಿಖರಾಲಯ  
ಕಾಳಮೇಘಂ।  
ಶ್ರೀ ಹಸ್ತಿ ಶೈಲ ಶಿಖರೋಜ್ವಲ  
ಪಾರಿಜಾತಂ।  
ಶ್ರೀಶಂ ನಮಾಮಿ ಶಿರಸಾ  
ಯದುಶೈಲದೀಪಂ ॥

★

ತಿರುಮಲೆ ತಿರುಪತಿ ದೇವಸ್ಥಾನಗಳು

# ದಾನಯೋಜನೆಯಲ್ಲಿ ಯಾತ್ರಿಕವಸತಿಗೃಹಗಳು

ತಿರುಮಲೆಯಲ್ಲಿ ನಿರಂತರ ಹೆಚ್ಚುತ್ತಿರುವ ಯಾತ್ರಿಕರ ಅನುಕೂಲಗಳಿಗಾಗಿ ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತವು ಹೆಚ್ಚಿನ ವಸತಿ ಸೌಕರ್ಯವನ್ನು ಒದಗಿಸಲು ತೀರ್ಮಾನಿಸಿದೆ. ಈ ಬೃಹತ್ ಕಾರ್ಯವನ್ನು ಭಕ್ತರ ಹಾಗೂ ಸೇವಾಕರ್ತರ ಸಕ್ರಿಯ ಸಹಕಾರದಿಂದ ನೆರವೇರಿಸಲು ತಿ.ತಿ.ದೇ. ನಿರ್ಧರಿಸಿದೆ.

ಈ ಯೋಜನೆಯ ವಿವರಗಳನ್ನು ಆಸಕ್ತರಿಗಾಗಿ ಈ ಕೆಳಗಿನಂತೆ ನಿರೂಪಿಸಲಾಗಿದೆ.

## ಗರುಡಾದ್ರಿನಗರ ವಸತಿಯೋಜನೆ

ಈ ಯೋಜನೆಯನ್ವಯ ಎರಡು ಅಂತಸ್ತುಗಳ 16 ವಸತಿಗೃಹಗಳನ್ನು (ಪ್ರತಿಯೊಂದು ಅಂತಸ್ತಿನಲ್ಲಿ 4 ಸೂಟ್‌ಗಳಿರುವಂತೆ) ನಿರ್ಮಿಸಲಾಗುವುದು. ಪ್ರತಿಯೊಂದು ಸೂಟ್ ಸಹ 10' × 12' ಗಳಿದ್ದು ಸ್ನಾನ ಶೌಚಾಗಾರಗಳೊಂದಿಗೆ ಹಾಗೂ ಸಾಮಾನ್ಯ ಅಂಗಳದೊಂದಿಗೆ ಕೂಡಿರುವುದು.

ಒಟ್ಟು 320 ಚದರಡಿ ಪ್ಲಿಂತ್ ವಿಸ್ತೀರ್ಣದ ಪ್ರತಿಸೂಟ್‌ಗಾಗಿ ದಾನ ನೀಡಬೇಕಾದ ಮೊಬಲಗು ರೂ 30,000 ಮಾತ್ರ.

ಒಟ್ಟು 128 ಸೂಟ್‌ಗಳಿರುವ ಈ ಯೋಜನೆಯಲ್ಲಿ ಆಸಕ್ತ ಭಕ್ತರು ಈಗಾಗಲೇ 66 ಸೂಟ್‌ಗಳಿಗಾಗಿ ದಾನಗಳನ್ನು ನೀಡಿದ್ದಾರೆ!

8 ಸೂಟ್‌ಗಳ ಒಂದು ವಸತಿಗೃಹದ ವೆಚ್ಚವಾದ 2.4 ಲಕ್ಷ ರೂಗಳನ್ನಾಗಲೀ, 4 ಸೂಟ್‌ಗಳ ವೆಚ್ಚವಾದ 1.2 ಲಕ್ಷ ರೂಗಳನ್ನಾಗಲೀ ಅಥವಾ ಎರಡು ಸೂಟ್‌ಗಳ ವೆಚ್ಚವಾದ ರೂ 60,000 ಗಳನ್ನಾಗಲೀ ನೀವು ದಾನ ನೀಡಬಹುದು.

## ರಾಮಬಗೀಚಾ ಅತಿಥಿಗೃಹ ಯೋಜನೆ

ತಿರುಮಲೆಯ ದೇವಾಲಯದ ಈಶಾನ್ಯ ಭಾಗದಲ್ಲಿನ ರಾಮ ಬಗೀಚಾದಲ್ಲಿ ಮೂರು ಅತಿಥಿ ಗೃಹಗಳನ್ನು ನಿರ್ಮಿಸಲು ತೀರ್ಮಾನಿಸಲಾಗಿದೆ.

ಪ್ರತಿಯೊಂದು ಅತಿಥಿಗೃಹವೂ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಅಂತಸ್ತಿನಲ್ಲಿ 50 ಸೂಟ್‌ಗಳಿರುತ್ತವೆ. ಪ್ರತಿಯೊಂದು ಸೂಟ್ 14' × 16' ವಿಸ್ತೀರ್ಣವಿದ್ದು ಸ್ನಾನ ಶೌಚ ಗೃಹಗಳು ಇರುತ್ತವೆ. ಪ್ಲಿಂತ್ ವಿಸ್ತೀರ್ಣ ಸುಮಾರು 600 ಚ. ಅಡಿಗಳಾಗಿದ್ದು ಸಾಮಾನ್ಯ ಅಂಗಳವಿರುವುದು. ಪ್ರತಿ ಸೂಟ್‌ನ ನಿರ್ಮಾಣಕ್ಕೆ ತಗಲುವ ದಾನದ ಮೊಬಲಗು ರೂ 60,000 ಮಾತ್ರ.

ತೀರ್ಮಾನಿಸಲಾದ 450 ಸೂಟ್‌ಗಳಲ್ಲಿ ಈಗಾಗಲೇ 37 ಸೂಟ್‌ಗಳಿಗಾಗಿ ದಾನಗಳನ್ನು ಸ್ವೀಕರಿಸಲಾಗಿದೆ!

## ನಿಮ್ಮ ದಾನದ ಪ್ರತಿಯಾಗಿ ದೊರೆಯುವ ಸೌಲಭ್ಯಗಳು ಈ ರೀತಿ ಇವೆ

1. ದಾನಿಗಳ ಹೆಸರಿನ ಫಲಕವನ್ನು ಕಟ್ಟಡದಲ್ಲಿ ಸ್ಥಾಪಿಸಲಾಗುವುದು
2. ಒಂದು ಬಾರಿಗೆ ಹತ್ತು ದಿನಗಳಿಗೆ ಮೀರದಂತೆ ದಾನಿಯು ಒಂದು ವರ್ಷದಲ್ಲಿ 60 ದಿನಗಳ ಕಾಲ ಉಚಿತವಾಗಿ ತಮ್ಮ ದಾನದ ಕಟ್ಟಡದಲ್ಲಿ ತಂಗಬಹುದು.
3. ದಾನಿಯ ಬಂಧುಗಳಿಗೆ ತಿರುಮಲೆಯಲ್ಲಿ ವಸತಿ ನೀಡುವಲ್ಲಿ ಆದ್ಯತೆ ನೀಡಲಾಗುವುದು.
4. ಅಪೇಕ್ಷಿಸಿದಾಗ ದಾನಿಯ ಕಟ್ಟಡ ಖಾಲಿಯಿಲ್ಲದಲ್ಲಿ ಇತರ ಏರ್ಪಾಡುಗಳನ್ನು ಮಾಡಿಕೊಡಲಾಗುವುದು.

ಕೂಡಲೇ ಬರೆಯಿರಿ – ಕಾರ್ಯನಿರ್ವಹಣಾಧಿಕಾರಿ
ತಿ. ತಿ. ದೇ. ತಿರುಪತಿ

(28ನೇ ಪುಟದಿಂದ)

"ಕುಕ್ಕುಟ ಕಸಕಡ್ಡಿಗಳ ರಾಶಿಯಲ್ಲಿ ಕೆದಕಿ ಬೆದಕಿ ಕಾಳುಗಳನ್ನು ಆರಿಸಿ ತಿನ್ನುತ್ತದೆ. ಹಾಗೆಯೇ ತನ್ನ ಮರಿಗಳಿಗೆ ಗುಟುಕನ್ನು ಕೊಡುತ್ತದೆ. ಅದೇ ರೀತಿಯಲ್ಲಿ ವೈಷ್ಣವನು ಅಪಾರ ಗ್ರಂಥಗಳಲ್ಲಿ ತನಗೆ ಬೇಕಾದ ತತ್ತ್ವವನ್ನು ಅಥವಾ ಆದರ್ಶವನ್ನು ಆರಿಸಿಕೊಳ್ಳಬೇಕು. ಆ ಆದರ್ಶವನ್ನು ಜೀವನದಲ್ಲಿ ಸಾಧಿಸಬೇಕು. ತನ್ನ ನೆರವನ್ನು ಕೋರಿ ಬಂದವರಿಗೂ ಆತನು ಸಹಾಯವನ್ನು ಮಾಡಬೇಕು.

"ಲವಣ ಹೆಚ್ಚಾದರೂ ರುಚಿಯಾಗಿರುವುದಿಲ್ಲ, ಕಡಿಮೆಯಾದರೂ ರುಚಿಯಾಗಿರುವುದಿಲ್ಲ. ಅಡುಗೆಗೆ ಉಪ್ಪು ಸರಿಯಾಗಿದ್ದಾಗ ಎಲ್ಲರೂ ತೃಪ್ತಿಯಿಂದ, ಸಂತೋಷದಿಂದ ಊಟಮಾಡುವರು. ಉಪ್ಪನ್ನು ಯಾರೂ ಹೊಗಳುವುದಿಲ್ಲ. ಅಡುಗೆಗೆ ಉಪ್ಪು ಜಾಸ್ತಿಯಾದಾಗ ಹಾಳು ಉಪ್ಪು ಜಾಸ್ತಿ ಎಂದು ಬೈಯುತ್ತಾರೆ. ಉಪ್ಪು ಕಡಿಮೆಯಾದಾಗ ಉಪ್ಪು ಸಾಲದು ಎಂದು ಗೊಣಗುತ್ತಾರೆ. ಹೊಗಳಿಕೆ ತೆಗಳಿಕೆಗಳಿಗೆ ನಿಜವಾದ ವೈಷ್ಣವನು ಮನಸ್ಸು ಕೊಡಬಾರದು. ಉಪ್ಪು ಹೇಗೆ ಅಡುಗೆಯಲ್ಲಿ ಕರಗಿ ಹೋಗುವುದೋ ಹಾಗೇ ವೈಷ್ಣವನು ದೇವರ ಸೇವೆಯಲ್ಲಿ ಭಕ್ತರ ಸೇವೆಯಲ್ಲಿ ತನ್ನನ್ನು ತಾನು ಮರೆಯಬೇಕು.

"ನೀನು ಆರುತಿಂಗಳಿಂದ ತಾಳ್ಮೆಯಿಂದ ಕಾದಿದ್ದೆ. ಈದಿನ ನಾಲ್ಕುಸಲ ಊಟಕ್ಕೆ ಕುಳಿತಾಗಲೂ ನಾನು ನಿನ್ನನ್ನು ಊಟಮಾಡದಂತೆ ತಡೆದು ಎಬ್ಬಿಸಿದೆ. ನೀನು ಒಂದು ಸಲವೂ ಬೇಜಾರು ಪಟ್ಟುಕೊಳ್ಳಲಿಲ್ಲ, ನೊಂದುಕೊಳ್ಳಲಿಲ್ಲ. ನನ್ನ ಆಜ್ಞೆಯನ್ನು ಸ್ವಲ್ಪವೂ ಮೀರಲಿಲ್ಲ. ನಿನಗೆ ಕೋಪವೂ ಬರಲಿಲ್ಲ. ವೈಷ್ಣವನು ನಿನ್ನಂತೆ ಸಹನೆಯನ್ನು ಕಲಿಯಬೇಕು. ಗುರುವಿನ ಆಜ್ಞೆಯನ್ನು ವಿರೋಧಿಸದೆ ಪರಿಪಾಲಿಸಬೇಕು. ಇವು ನಾಲ್ಕೂ ವೈಷ್ಣವನ ಲಕ್ಷಣಗಳು." ಎಂದು ಅನಂತಸೂರಿಯವರು ಆತನಿಗೆ ವಿವರಿಸಿದರು.

ಅನಂತಸೂರಿಯವರು ರಾಮಾನುಜರ ಆದೇಶದಂತೆ ವೈಷ್ಣವ ಮತಪ್ರಸಾರಕ್ಕೆಂದು ದೇಶಸಂಚಾರ ಮಾಡಿದರು. ತಿರುಪತಿಯಿಂದ ಕೇರಳದವರೆಗೂ ಹೋಗಿದ್ದರು. ಆ ಸಮಯದಲ್ಲಿ ತಮ್ಮ ಊರಾದ ಕಿರಂಗೂರಿಗೂ, ಶ್ರೀರಂಗಪಟ್ಟಣಕ್ಕೂ, ಮೇಲಿಕೋಟೆಗೂ ಭೇಟಿಯಿತ್ತಿದ್ದರು. ಸದಾ ವೆಂಕಟೇಶ್ವರನನ್ನೇ ಧ್ಯಾನಮಾಡುತ್ತಿದ್ದ ಅನಂತಸೂರಿಯವರಿಗೆ ಮೇಲುಕೋಟೆಯ ಚೆಲುವರಾಯಸ್ವಾಮಿಯ ವಿಗ್ರಹ ತಿರುಪತಿಯ ವೆಂಕಟೇಶ್ವರನಂತೆಯೇ ಕಾಣಿಸಿತು. ಅವರು ಆನಂದದಿಂದ "ನನ್ನ ಸ್ವಾಮಿ ನನಗಿಂತ ಮೊದಲೇ ನೀನು ಇಲ್ಲಿಗೆ ಬಂದೆಯಾ ?" ಎಂದು ಭಾವಾವಿಷ್ಟರಾಗಿ ಕೇಳಿದರು. ಆಗ ಅವರ ಹತ್ತಿರದಲ್ಲಿದ್ದವರಿಗೆಲ್ಲ ಚೆಲುವರಾಯನ ವಿಗ್ರಹವು ವೆಂಕಟೇಶ್ವರನ ವಿಗ್ರಹದಂತೆಯೇ ಕಂಡುಬಂದಿತು. ಚೆಲುವರಾಯನು ವೆಂಕಟೇಶ್ವರನಾಗಿ ಅನಂತಸೂರಿಗೆ ದರ್ಶನವಿತ್ತ ಘಟನೆಯ ನೆನಪಿಗಾಗಿ ಇಂದಿಗೂ ಮೇಲುಕೋಟೆಯಲ್ಲಿ ವರ್ಷಕ್ಕೆ ಒಂದುದಿನ ದೇವರಿಗೆ ವೆಂಕಟೇಶ್ವರನಂತೆ ಅಲಂಕಾರ ಮಾಡುತ್ತಾರೆ.

ರಾಮಾನುಜರನ್ನು ತಿರುಪತಿಗೆ ಭೇಟಿಕೊಡಬೇಕೆಂದು ಅನಂತಸೂರಿ ಹಲವಾರು ಸಲ ಪ್ರಾರ್ಥಿಸಿದ್ದರು. ಶಿಷ್ಯನ ಅಪೇಕ್ಷೆಯಂತೆ ರಾಮಾನುಜರು ತಿರುಪತಿಗೆ ಭೇಟಿಕೊಟ್ಟರು. ಅನಂತಸೂರಿಯವರು ಹೂವಿನ ತೋಟವಲ್ಲದೇ ದೇವಸ್ಥಾನಕ್ಕೆ ದೊಡ್ಡ ಪ್ರಾಕಾರವನ್ನು ಕಟ್ಟಿಸಿದರು. ಪ್ರಸಿದ್ಧ ವೈಷ್ಣವ ಸಂತರಾಗಿದ್ದ ಯಾಮುನಾಚಾರ್ಯರ ನೆನಪಿಗಾಗಿ ಒಂದು ಮಂಟಪವನ್ನು ನಿರ್ಮಿಸಿದ್ದರು. ರಾಮಾನುಜರು ಇವೆಲ್ಲವನ್ನು ನೋಡಿ ಮೆಚ್ಚಿಕೊಂಡರು. "ಶಿಷ್ಯನು ಹೇಗಿರಬೇಕೆಂದರೆ ನಮ್ಮ ಅನಂತಸೂರಿಯಂತೆ ಇರಬೇಕು. ಗುರುವಿನ ಆಜ್ಞೆಯನ್ನು ಶ್ರದ್ಧೆಯಿಂದ ನಡೆಸುವ ಕಾರ್ಯಶೀಲನಾಗಬೇಕು" ಎಂದು ಹೇಳುತ್ತಿದ್ದರು. ಅನಂತಸೂರಿಯು ದೇವರ ಪೂಜೆಗೆ, ಉತ್ಸವಗಳಿಗೆ, ದೇವರಸೇವೆಗೆ ಮಾಡಿದ್ದ ವ್ಯವಸ್ಥೆಯನ್ನು ಕಂಡು ತುಂಬಾ ಸಂತೋಷಪಟ್ಟರು. ದೇವಸ್ಥಾನದ ವಹಿವಾಟನ್ನು ಅನಂತಸೂರಿಯವರೇ ನಡೆಸಿಕೊಂಡು ಹೋಗುವಂತೆ ರಾಮಾನುಜರು ಅಪ್ಪಣೆ ಮಾಡಿದರು.

ರಾಮಾನುಜರು ಶ್ರೀರಂಗಕ್ಕೆ ಹಿಂದಿರುಗುವಾಗ ಅನಂತಸೂರಿಗೆ ತುಂಬಾ ದುಃಖವಾಯಿತು. ಸೂರಿ ಅವರನ್ನು ತಿರುಪತಿಯಲ್ಲೇ ಇದ್ದುಬಿಡುವಂತೆ ಮತ್ತೆ ಮತ್ತೆ ಬೇಡಿಕೊಂಡರು. ರಾಮಾನುಜರು ಶಿಷ್ಯನನ್ನು ಸಂತೈಸಿ ತಮ್ಮ ವಿಗ್ರಹವೊಂದನ್ನು ಕೊಟ್ಟರು. "ಮಗೂ, ಈ ವಿಗ್ರಹದಲ್ಲಿ ಸದಾ ಕಾಲವೂ ನನ್ನ ಸನ್ನಿಧಿಯೇ ಇರುತ್ತದೆ. ನೀನು ನಿನ್ನ ಪ್ರಾರ್ಥನೆಯನ್ನು ಇದರ ಮುಂದೆ ಹೇಳಿಕೊಂಡರೆ ನನಗೆ ತಿಳಿಯುತ್ತದೆ" ಎಂದು ಮೃದುವಾಗಿ ನುಡಿದರು. ಅನಂತಸೂರಿಯನ್ನು ಪ್ರೀತಿಯಿಂದ ಆಶೀರ್ವದಿಸಿ ಅವರು ಶ್ರೀರಂಗಕ್ಕೆ ಹೊರಟರು.

ಅನಂತಸೂರಿಯವರು ತಾವು ಬದುಕಿದಷ್ಟು ಕಾಲವೂ ವೆಂಕಟೇಶ್ವರನ ಸೇವೆಯನ್ನು ಮಾಡಿದರು. ಅವರು ತಮ್ಮಂತೆಯೇ ತಮ್ಮ ಮಗನೂ ಮೊಮ್ಮಕ್ಕಳೂ ದೇವರ ಸೇವೆಯನ್ನು ಮಾಡಬೇಕೆಂದು ಕಟ್ಟುಪಾಡು ಮಾಡಿದರು. ರಾಮಾನುಜರ ಅಪ್ಪಣೆಯಂತೆ ಸೂರಿ ತಿರುಪತಿಗೆ ಬಂದಿದ್ದರು. ಅವರು ಬರುವಮೊದಲು ದೇವರಪೂಜೆಗೆ,ಸೇವೆಗೆ ಉತ್ಸವಗಳಿಗೆ ಸರಿಯಾದ ವ್ಯವಸ್ಥೆ ಇರಲಿಲ್ಲ. ಅನಂತಸೂರಿ ಒಂದೊಂದಾಗಿ ಪ್ರತಿಯೊಂದನ್ನೂ ಕ್ರಮಪಡಿಸಿದರು: ಅವರು ತಿಳಿಯದೇ ದೇವರ ಗಲ್ಲಕ್ಕೆ ಏಟುಕೊಟ್ಟಿದ್ದರು. ಗಲ್ಲದಿಂದ ರಕ್ತ ತೊಟ್ಟಿಕ್ಕಿತ್ತು. ರಕ್ತಸ್ರಾವ ನಿಲ್ಲಿಸಲು ದೇವರ ಗಲ್ಲಕ್ಕೆ ಪಚ್ಚಕರ್ಪೂರವನ್ನು ಮೆತ್ತಿದರು. ಅದರ ನೆನಪಿಗಾಗಿ ಇಂದಿಗೂ ವೆಂಕಟೇಶ್ವರನ ಗಲ್ಲಕ್ಕೆ ಪಚ್ಚಕರ್ಪೂರ ಹಚ್ಚುವ ವಾಡಿಕೆಯಿದೆ. ಸೂರಿ ಉಪಯೋಗಿಸುತ್ತಿದ್ದ ಸನಿಕೆ ದೇವಾಲಯದ ಗೋಪುರದ ಮೇಲಿದೆ. ಅವರ ಹೂದೋಟದಲ್ಲಿ ಹಾವಳಿ ಮಾಡಿದರೆಂದು ಅವರು ವೆಂಕಟೇಶ್ವರನನ್ನೇ ಹಿಡಿದಿದ್ದರಿಲ್ಲವೆ? ಅವರಿಂದ ಬಿಡಿಸಿಕೊಂಡು ಓಡಿಹೋದ ವೆಂಕಟೇಶ್ವರನು ದೇವಾಲಯವನ್ನು ಎಡಗಡೆಯಿಂದ ಬಳಸಿಕೊಂಡು ಒಳಹೊಕ್ಕನು. ವರ್ಷದಲ್ಲಿ ಒಂದುದಿನ ಇಂದಿಗೂ ವೆಂಕಟೇಶ್ವರನ ಉತ್ಸವವು ಅಪ್ರದಕ್ಷಿಣೆಯಾಗಿಯೇ ಆಲಯಕ್ಕೆ ಹಿಂತಿರುಗುತ್ತದೆ. ದೇವರ ಮಾವನೆಂಬ ಬಿರುದು ಹೊತ್ತ ಅನಂತಸೂರಿಯ ವಿಗ್ರಹಕ್ಕೆ ಇಂದಿಗೂ ವಿಶೇಷ ಮರ್ಯಾದೆ ಸಲ್ಲುತ್ತಿದೆ.

ಶ್ರೀರಾಮಾನುಜರು ನಿಧನರಾದಾಗ ಅನಂತಸೂರಿಗೆ ಎಂಬತ್ತು ವರ್ಷಗಳಿಗೂ ಹೆಚ್ಚಾಗಿತ್ತು. ತಮ್ಮ ಗುರುವಿನ ಮರಣವಾರ್ತೆ ಅವರಿಗೆ ತುಂಬಾ ದುಃಖವನ್ನುಂಟುಮಾಡಿತು. ಅವರು ಸದಾ ಗುರುವಿನ ಸ್ಮರಣೆ ಮಾಡುತ್ತ, ವೆಂಕಟೇಶ್ವರನ ಧ್ಯಾನ ಮಾಡುತ್ತ ತಮ್ಮ ಕೊನೆಯ ದಿನಗಳನ್ನು ಕಳೆದರು. ವಯಸ್ಸು ಹೆಚ್ಚಾಗಿ ಶರೀರವು ದುರ್ಬಲವಾಯಿತು, ಕಣ್ಣು ಮಂಜಾದವು, ಕೈಗಳು ನಡುಗುತ್ತಿದ್ದವು. ಆದರೂ ಅವರು ದೇವರ ಸೇವೆಯನ್ನು ನಿಲ್ಲಿಸಲಿಲ್ಲ: ವೆಂಕಟೇಶ್ವರನಿಗೆ ಹೂ ಮಾಲೆಗಳನ್ನು ಪೋಣಿಸುವುದನ್ನು ಬಿಡಲಿಲ್ಲ. ನಡುಗುವ ಕೈಗಳಿಂದ ಹೂ ಮಾಲೆಯನ್ನು ಕಟ್ಟಿ ನಿಧಾನವಾಗಿ ನಡೆದುಕೊಂಡು ಬಂದು ಸ್ವಾಮಿಯ ಪಾದಗಳಿಗೆ ಅರ್ಚಿಸುತ್ತಿದ್ದರು. ದೇವರನ್ನು ದರ್ಶನಮಾಡುತ್ತ ಮೈಮರೆತು ಬಿಡುತ್ತಿದ್ದರು.

ಕರ್ನಾಟಕದ ಈ ಭಕ್ತಶ್ರೇಷ್ಠ ಹೀಗೆಯೇ ತಮ್ಮ ಜೀವನವನ್ನು ಭಗವಂತನ ಸೇವೆಯಲ್ಲಿ ಸಾರ್ಥಕವಾಗಿ ಸವೆಸಿದರು. ಅನಂತಸೂರಿ ತಮ್ಮ ತೊಂಬತ್ತನೆಯ ವಯಸ್ಸಿನಲ್ಲಿ ವೆಂಕಟೇಶ್ವರನ ನಾಮಸ್ಮರಣೆ ಮಾಡುತ್ತ ಪರಮ ಪದವನ್ನು ಸೇರಿದರು. ಅವರ ಪ್ರೀತಿ ವಾತ್ಸಲ್ಯಗಳನ್ನು ಉಂಡಿದ್ದ ಅವರ ಶಿಷ್ಯರೆಲ್ಲ ಸೇರಿ ಅನಂತಸೂರಿಯವರ ವಿಗ್ರಹಗಳನ್ನು ಮಾಡಿಸಿದರು. ಅವುಗ ತಿರುಪತಿ ಗೋವಿಂದರಾಜ ಪಟ್ಟಣ, ಕಾಂಚೀಪುರಂ ಮತ್ತು ಮಂಡ್ಯದ ಶ್ರೀಜನಾರ್ದನಸ್ವಾಮಿಯವರ ದೇವಸ್ಥಾನಗಳಲ್ಲಿ ಪ್ರತಿಷ್ಠೆ ಮಾಡಿದರು. ಶ್ರೀ ಅನಂತಸೂರಿಯವರದು ಗಂಧದ ಮರದಂತೆ ಪೂರ್ಣವಾಗಿ ಸಾರ್ಥಕವಾದ ಜೀವನ, ಕರ್ಮಯೋಗಿಯ ಶ್ರೇಷ್ಠಜೀವನ.

★

# ವಾರ್ತಾಲಹರಿ

## ತಿರುಮಲೆಯಲ್ಲಿ ಹೊಸನಿರ್ಮಾಣಗಳು

ಶ್ರೀ ವೇಂಕಟೇಶ್ವರಸ್ವಾಮಿಯ ನೆಲೆಯಾದ ತಿರುಮಲೆಯಲ್ಲಿ 2 ಕೋಟಿ ರೂಪಾಯಿ ಅಂದಾಜು ವೆಚ್ಚದ ನಾಲ್ಕು ಅಂತಸ್ತುಗಳ ಒಂದು ಶಾಪಿಂಗ್ ಕಾಂಪ್ಲೆಕ್ಸ್ ಅನ್ನು ನಿರ್ಮಿಸಲಾಗುವುದೆಂದು ತಿ.ತಿ. ದೇವಸ್ಥಾನಗಳ ಬೋರ್ಡ್ ಅಧ್ಯಕ್ಷ ಶ್ರೀ ವಿ. ಕೆ. ಡಿ. ವಿ. ಸತ್ಯನಾರಾಯಣರಾಜು ಅವರು ತಿಳಿಸಿದ್ದಾರೆ.

ಆಡಳಿತ ನಿರ್ವಾಹಕ ಮಂಡಳಿಯ ಸಭಾಕಲಾಪಗಳ ಬಗ್ಗೆ ಪತ್ರಕರ್ತರಿಗೆ ವಿವರಗಳನ್ನು ನೀಡುತ್ತ ಶ್ರೀಯುತರು, ಇಂತಹ ಒಂದು ಶಾಪಿಂಗ್ ಕಾಂಪ್ಲೆಕ್ಸ್ ಇಲ್ಲದೆ ತಿರುಮಲೆಯ ಬಸ್‌ಸ್ಟಾಂಡಿನಿಂದ ಆರಂಭಿಸಿ ದೇವಾಲಯದವರೆಗಣ ರಸ್ತೆಯನ್ನೆಲ್ಲ ಚಿಲ್ಲರೆ ಮಾರಾಟಗಾರರು ಆಕ್ರಮಿಸಿ ರದ್ದಿಯಾಗಿ, ಯಾತ್ರಿಕರಿಗೆ ತೊಂದರೆ ಆಗುತ್ತಿತ್ತು ಎಂದೂ, ಈ ತೊಂದರೆಯನ್ನು ನಿವಾರಿಸಲು ಸುವ್ಯವಸ್ಥಿತವಾದ ಶಾಪಿಂಗ್ ಕಾಂಪ್ಲೆಕ್ಸ್ ನಿರ್ಮಾಣವಾಗಲಿದೆ ಎಂದೂ ತಿಳಿಸಿದರು.

ಸ್ವಾಮಿ ಪ್ರಸಾದವಾದ ಲಾಡುವಿನ ಬಗ್ಗೆ ಬರುತ್ತಿದ್ದ ವಿಮರ್ಶೆಯನ್ನು ನಿವಾರಿಸಲು ಲಾಡುವಿನ ಗುಣಮಟ್ಟವನ್ನು ಹೆಚ್ಚಿಸುವಂತೆ ಅದರಲ್ಲಿನ ಕೆಲವು ವಿಶೇಷ ಪದಾರ್ಥಗಳ ಪ್ರಮಾಣವನ್ನು ಹೆಚ್ಚಿಸಲು, ದೇವಾಲಯದ ಅಡಿಗೆಯ ಮನೆಯನ್ನು ಆಧುನಿಕ ಉಪಕರಣಗಳಿಂದ ಸೌಕರ್ಯಯುಕ್ತಗೊಳಿಸುವಂತೆಯೂ ತೀರ್ಮಾನ ತೆಗೆದುಕೊಳ್ಳಲಾಗಿಯೆಂದರು.

ದೇವಾಲಯದ ಪುಷ್ಕರಿಣಿಯಲ್ಲಿ ಸ್ನಾನ ಮಾಡುವ ಯಾತ್ರಿಕರ ಸುರಕ್ಷತೆಗಾಗಿ ಪುಷ್ಕರಣಿಯಲ್ಲಿ 25 ಲಕ್ಷ ರೂ।ಗಳ ವೆಚ್ಚದಲ್ಲಿ ಗ್ರಾನೈಟ್ ಶಿಲೆಯ ಮೆಟ್ಟಿಲುಗಳನ್ನು ನಿರ್ಮಿಸಲಾಗುವುದೆಂದೂ, ಅಲ್ಲಿನ ನೀರಿನ ಶುದ್ಧೀಕರಣಕ್ಕಾಗಿ ಕ್ರಮಗಳನ್ನು ಕೈಗೊಳ್ಳಲಾಗುವುದೆಂದೂ ಅವರು ತಿಳಿಸಿದರು.

ಮಳೆಗಾಲದಲ್ಲಿ ಬೆಟ್ಟದಲ್ಲಿ ಹರಿದು ಹೋಗುವ ನೀರನ್ನು ಅಲ್ಲಲ್ಲಿ ತಡೆಯೊಡ್ಡುವುದರ ಮೂಲಕ ಸಂಗ್ರಹಿಸಲು ಅನುವಾಗುವಂತೆ ತಡೆಯೊಡ್ಡುಗಳನ್ನು ನಿರ್ಮಿಸಲು ತೀರ್ಮಾನಿಸಲಾಗಿದೆಯೆಂದೂ, ಎರಡು ಉಪಭಾಗಗಳನ್ನೊಳಗೊಂಡ ಒಂದು ಪ್ರತ್ಯೇಕ ವಿಭಾಗವನ್ನು ನಿರ್ಮಿಸಿ ಈ ಕಾರ್ಯದ ಬಗ್ಗೆ ಪೂರ್ಣಪರಿಶೀಲನೆ ನಡೆಸಲಾಗುವುದೆಂದೂ ಅಧ್ಯಕ್ಷರು ತಿಳಿಸಿದರು.

ತಿರುಮಲೆಯಲ್ಲಿ 5.8 ಕೋಟಿ ರೂ। ಗಳ ಅಂದಾಜು ವೆಚ್ಚದಲ್ಲಿ ಒಂದು ನಕ್ಷತ್ರ ವೀಕ್ಷಣಾಗಾರವನ್ನು ನಿರ್ಮಿಸಲು ತೀರ್ಮಾನಿಸಲಾಗಿದೆಯೆಂದರು.

ತಿರುಪತಿಯ ಎಸ್. ಪಿ. ಡಬ್ಲ್ಯೂ ಕಾಲೇಜ ಹಾಗೂ ಎಸ್. ವಿ. ಜೂನಿಯರ್ ಕಾಲೇಜುಗಳಿಗೆ ಪ್ರಸಕ್ತ ವರ್ಷದಿಂದಲೆ, ಹೆಚ್ಚಿನ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳಲು ಅನುಕೂಲವಾಗುವಂತೆ 11.3 ಲಕ್ಷ ರೂ। ಗಳ ವೆಚ್ಚದಲ್ಲಿ ಹೆಚ್ಚಿನ ಸ್ಥಳಾವಕಾಶವನ್ನು ಮಾಡಿಕೊಡಲಾಗುವುದೆಂದರು.

ಧಾರ್ಮಿಕ ಪ್ರಕಟನೆಗಳ ಹೆಚ್ಚಿನ ಚಟುವಟಿಕೆಗಳಿಗಾಗಿ ತಿ.ತಿ.ದೇವಸ್ಥಾನಗಳ ಮುದ್ರಣಾಲಯದಲ್ಲಿ ಎರಡನೆಯ ಷಿಫ್ಟ್‌ಅನ್ನು ಆರಂಭಿಸುವುದಾಗಿ ಅಧ್ಯಕ್ಷರು ತಿಳಿಸಿದರು. ಹೈದರಾಬಾದಿನಲ್ಲಿ 70ಲಕ್ಷ ರೂ। ಗಳ ವೆಚ್ಚದಲ್ಲಿ ತಿ. ತಿ. ದೇವಸ್ಥಾನಗಳ ಕಲ್ಯಾಣಮಂಟಪ ಕಾಂಪ್ಲೆಕ್ಸ್ ಅನ್ನು ನಿರ್ಮಿಸಲಾಗುವುದೆಂದು ಅವರು ತಿಳಿಸಿದರು.

ತಿರುಮಲೆಯ ರಾಮಬಗೀಚಾದಲ್ಲಿ ನಿರ್ಮಾಣದ ವಿವಿಧ ಹಂತಗಳಲ್ಲಿರುವ ಮೂರು ಹೊಸ ಅತಿಥಿಗೃಹಗಳ ಬಳಿ 22.3 ಲಕ್ಷ ರೂ। ಗಳ ವೆಚ್ಚದಲ್ಲಿ ಕಾಲುವೆ ನಿರ್ಮಾಣವಾಗುವುದೆಂದೂ, ತಿರುಮಲೆಮಲ್ಲಿ 98 ಲಕ್ಷ ರೂ। ಗಳ ವೆಚ್ಚದಲ್ಲಿ ಒಂದು ಹೊಸ ಬಸ್ ಸ್ಟ್ಯಾಂಡ್ ನಿರ್ಮಾಣ ಮಾಡಲಾಗುವುದೆಂದೂ ಅವರು ತಿಳಿಸಿದರು.

* * * *

## ವಿಷ್ಣುಸಹಸ್ರನಾಮ ವ್ಯಾಖ್ಯಾನ ಕೃತಿಯ ಬಿಡುಗಡೆ

ಮೂಲ ಸಂಸ್ಕೃತದಲ್ಲಿ ಸತ್ಯಸಂಧತೀರ್ಥರು ಮಾಧ್ವ ಸಂಪ್ರದಾಯಾನುಗುಣವಾಗಿ ಬರೆದ ವಿಷ್ಣುಸಹಸ್ರನಾಮ ವ್ಯಾಖ್ಯಾನದ ತೆಲುಗು ಅನುವಾದವನ್ನು ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಅಗಸ್ಟ್ 85ರ 12 ರಂದು ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎಸ್. ಲಕ್ಷ್ಮಣಯ್ಯ ಅವರ ಅಧ್ಯಕ್ಷತೆಯಲ್ಲಿ ಪುರಾಣ ಪಂಡಿತ ಶ್ರೀ ತುಲಸೀ ನರಸಿಂಹಾಚಾರ್ಯರು ಬಿಡುಗಡೆ ಮಾಡಿದರು. ಮತ್ತೊಬ್ಬ ಪುರಾಣ ಪಂಡಿತ ಶ್ರೀ ಮೇಡವರಂ ಮುರಳಿಕೃಷ್ಣ ಮೂರ್ತಿಯವರೂ ಮಾತನಾಡಿದ ಸಭೆಯಲ್ಲಿ ತೆಲಗು ಪುಸ್ತಕದ ಅನುವಾದಕ ಶ್ರೀ ಜಿ.ವಿ. ಸುಬ್ರಹ್ಮಣ್ಯಶರ್ಮ ಅವರನ್ನು ಸನ್ಮಾನಿಸಲಾಯಿತು.

## ತಿರುಮಲೆಯ ವಾಸಿಗಳಿಗೆ ತಿರುಪತಿಯಲ್ಲಿ ವಸತಿ ಏರ್ಪಾಡು

ತಿರುಪತಿಯ ಮಂಗಳಂ ಗ್ರಾಮದ ಬಳಿ, ತಿರುಮಲೆಯ ಕೊಳಚೆ ಪ್ರದೇಶದ ನಿವಾಸಿಗಳಿಗಾಗಿ ನಿರ್ಮಿಸಲಾಗುವ ಪ್ರತ್ಯೇಕ ಕಾಲೋನಿಗೆ ಭಾನುವಾರದಂದು (18-8-85) ಆಂಧ್ರಪ್ರದೇಶದ ದೇವಾದಾಯ ಇಲಾಖಾ ಮಂತ್ರಿ ಶ್ರೀ ಯತಿರಾಜಾರಾವ್ ಅವರು ಶಂಕುಸ್ಥಾಪನೆಯನ್ನು ಮಾಡಿದರು.

ಶಂಕುಸ್ಥಾಪನಾ ಸಮಾರಂಭದಲ್ಲಿ ಮಾತನಾಡುತ್ತ ಮೊದಲ ಹಂತದಲ್ಲಿ ಒಂದು ಸಾವಿರ ಮನೆಗಳನ್ನು ನಗರವಸತಿಯೋಜನಾನ್ವಯ ನಿರ್ಮಿಸಲು ಆಂಧ್ರಪ್ರದೇಶ ಸರಕಾರ ಒಪ್ಪಿದೆಯೆಂದೂ, ಚಿತ್ತೂರು ಜಿಲ್ಲೆಯ ಗೃಹನಿರ್ಮಾಣದ ಈ ವರ್ಷದ ಕೋಟಾದಲ್ಲಿ ಇವು ಸೇರಿವೆಯೆಂದೂ ತಿಳಿಸಿದರು.

ತಿ.ತಿ.ದೇ. ಪೌರಸಂಬಂಧ ಶಾಖಾಧಿಕಾರಿ ಶ್ರೀ ರಾವುಲಸೂರ್ಯನಾರಾಯಣ ಮೂರ್ತಿ ಅವರು ಸ್ವಾಗತಿಸಿದ ಸಭೆಗೆ ಚಿತ್ತೂರುಜಿಲ್ಲಾಧಿಕಾರಿ ಡಾ॥ ಶ್ರೀಧರಶರ್ಮ ಅವರು ಅಧ್ಯಕ್ಷತೆ ವಹಿಸಿದ್ದರು. ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್.

ಲಕ್ಷ್ಮೀನಾರಾಯಣ ಹಾಗೂ ಜಿಲ್ಲಾ ಕಲೆಕ್ಟರ್ ಸ್ವಾಲ್ ಭಾಗವಹಿಸಿದ್ದರು. ಈಚಿನ ವರ್ಷಗಳಲ್ಲಿ ತಿರುಮಲೆಯಲ್ಲಿ ಹೆಚ್ಚುತ್ತಿದ್ದ ಜನಸಂಖ್ಯೆಯ ಬಗ್ಗೆ ತಿ. ತಿ. ದೇವಸ್ಥಾನಗಳ ಆತಂಕವನ್ನು ಇಲ್ಲಿ ನೆನೆಯಬಹುದು. 1941ರಲ್ಲಿ 200 ಇದ್ದ ಜನಸಂಖ್ಯೆ 30,000 ವನ್ನೂ ಮೀರಿದೆ ಯೆಂದು ಅಂದಾಜು ಮಾಡಲಾಗಿದೆ. ಹೊಸ ಮಾಸ್ಟರ್ ಪ್ಲಾನ್‌ನಿಂದಾಗಿ ತಿರುಮಲೆಯಲ್ಲಿ ಜನ ಸಂಖ್ಯಾಸಂದಣಿ ಕಡಿಮೆಯಾಗುವುದೆಂದು ನಂಬಲಾಗಿದೆ.

## ರಸ್ತೆ ಸಾರಿಗೆ ಸಂಸ್ಥೆ ಸಿಬ್ಬಂದಿ ಪ್ರಯಾಣಿಕ ವರ್ಗದ ಸಮಾವೇಶ

ತಿರುಪತಿ ತಿರುಮಲೆಗಳ ಮಧ್ಯದಲ್ಲಿ ಪ್ರಯಾಣ ಮಾಡುವ ಯಾತ್ರಿಕರಿಂದ ಬೇರೆ ಬೇರೆ ರೀತಿಯ ಬಸ್‌ಗಳಲ್ಲಿ ಬೇರೆ ಬೇರೆ ರೀತಿಯ ಪ್ರಯಾಣಶುಲ್ಕವನ್ನು ರದ್ದುಮಾಡಿ ಏಕರೀತಿಯ ಬಸ್‌ಛಾರ್ಜ್ ಪದ್ಧತಿಯನ್ನುಂಟು ಮಾಡಬೇಕೆಂದು ತಿ. ತಿ; ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀ ನಾರಾಯಣ ಅವರು ಕರೆ ನೀಡಿದರು.

ಆಂಧ್ರಪ್ರದೇಶ ರಸ್ತೆ ಸಾರಿಗೆಯ ಸಿಬ್ಬಂದಿಯ ಹಾಗೂ ಪ್ರಯಾಣಿಕರ ಪರಸ್ಪರಾವಗಾಹನ ಸಮಾವೇಶದ ಅಧ್ಯಕ್ಷತೆ ವಹಿಸಿ ಮಾತನಾಡುತ್ತಿದ್ದ ಶ್ರೀಯುತರು ತಿರುಮಲೆ–ತಿರುಪತಿಗಳ ಮಧ್ಯೆ ನಡೆಸಲಾಗುವ ಬಸ್‌ಗಳಲ್ಲಿ ಯಾಂತ್ರಿಕ ಲೋಪಗಳಿಲ್ಲದಂತೆ ಮಾಡುವ ಬಗ್ಗೆ ಅವಧಾರಿಸಿ ನುಡಿದರು. ತಿರುಪತಿಗೆ ಬರುವ ಯಾತ್ರಿಕರು ತಿರುಪತಿಯನ್ನು ಬಿಟ್ಟು ಊರಿಗೆ ಹಿಂದಿರುಗುವಾಗ ಇನ್ನೊಂದು ದಿವ್ಯ ಅನುಭವವನ್ನು ನೆನಪಿನಲ್ಲಿಟ್ಟುಕೊಳ್ಳಲು ಅನುಕೂಲವಾಗುವಂತೆ ತಿ.ತಿ.ದೇ., ಆರ್. ಅಂಡ್ ಬಿ, ಪೋಲೀಸು ಶಾಖೆ, ಆರ್ಟಿಸಿಗಳು ಒಟ್ಟಿಗೆ ಕೆಲಸ ಮಾಡಬೇಕೆಂದು ಸೂಚಿಸಿದರು.

ಸಮಾವೇಶದಲ್ಲಿ ಮಾತನಾಡಿದ ತುಡ(ತಿರುಪತಿ ಅರ್ಬನ್ ಡೆವಲಪ್‌ಮೆಂಟ್ ಅಥಾರಿಟಿ) ಅಧ್ಯಕ್ಷರಾದ ಶ್ರೀ ವೆಂಕಟರಾಮಾ ನಾಯುಡು ಅವರು ತಿರುಪತಿಯ ರಸ್ತೆಗಳ ದಾರುಣ ಪರಿಸ್ಥಿತಿಯನ್ನೂ ತಿರುಪತಿಗೆ ಅಗತ್ಯವಾದ ಹೆಚ್ಚಿನ ಸ್ಥಳೀಯ ಬಸ್‌ಗಳ ಅಗತ್ಯವನ್ನೂ ವಿವರಿಸಿ ಸಲಹೆಗಳನ್ನು ನೀಡಿದರು.

ವಿವಿಧ ವರ್ಗಗಳ ಜನತೆ ಹಾಗೂ ಆರ್ಟಿಸಿ ಸಿಬ್ಬಂದಿಯವರು ಭಾಗವಹಿಸಿದ ಈ ಪರಸ್ಪರಾವಗಾಹನ ಸಭೆಯಲ್ಲಿ ತಿರುಪತಿಯ ಡಿವಿಜನಲ್ ಮ್ಯಾನೇಜರ್ ಶ್ರೀ ಪ್ರಭಾಕರರಾವ್ ಆರ್ಟಿಸಿ 1983 ರಿಂದ ಸಾಧಿಸಿದ ಪ್ರಗತಿಯನ್ನು ವಿವರಿಸಿ ಇಲ್ಲಿ ಹೊರಹೊಮ್ಮಿದ ಎಲ್ಲ ಸಲಹೆಗಳನ್ನು ಪರಿಶೀಲಿಸಿ ಆದಷ್ಟು ಹೆಚ್ಚಿಗೆ ಪರಿಣಾಮಕಾರಿ ಪ್ರಯೋಜನಗಳನ್ನು ನೀಡಲು ಪ್ರಯತ್ನಿಸುವುದಾಗಿ ಭರವಸೆ ನೀಡಿದರು.

## ಕರ್ನಾಟಕದಲ್ಲಿ ಭಾರತ ಸಂಸ್ಕೃತಿ ಪರಿಚಯ ಪರೀಕ್ಷೆ

ಕರ್ನಾಟಕದ ವಿಶ್ವಹಿಂದೂ ಪರಿಷತ್ತಿನ ಆಶ್ರಯದಲ್ಲಿ ಹಿಂದಿನ ವರ್ಷಗಳಂತೆಯೇ ಈ ವರ್ಷವೂ ಭಾರತ ಸಂಸ್ಕೃತಿ ಪರಿಚಯ ಪರೀಕ್ಷೆಯನ್ನು ಹೈಸ್ಕೂಲು, ಪ್ರೀಯೂನಿವರ್ಸಿಟಿ ವಿದ್ಯಾರ್ಥಿಗಳಿಗಾಗಿ ನಡೆಸಿ ಪ್ರಶಸ್ತಿ, ಪ್ರಮಾಣ ಪತ್ರಗಳನ್ನು ವಿತರಿಸಲು ಯೋಜಿಸಲಾಗಿದೆ. ಆಸಕ್ತರು ಶ್ರೀ ಮೋಹನದಾಸ್ ಥಾವಸ್ಕರ್, ಭಾರತ ಸಂಸ್ಕೃತಿ ಪರಿಚಯ ಪರೀಕ್ಷೆ, ವಿಶ್ವಹಿಂದೂ ಪರಿಷತ್, ಧರ್ಮಶ್ರೀ, ಶಂಕರಪುರಂ, ಬೆಂಗಳೂರು 560004–ಇವರಿಗೆ ಬರೆಯಬಹುದೆಂದು ಪತ್ರಿಕಾ ಪ್ರಕಟನೆಯೊಂದು ತಿಳಿಸಿದೆ.

## ತಿರುಪತಿ ಪೌರಸಮಿತಿಯ ವಾರ್ಷಿಕೋತ್ಸವ

ತಿರುಪತಿಯ ಪೌರಸಮಿತಿಯ ವಾರ್ಷಿಕೋತ್ಸವವು 15-8-85ರಂದು ಉಪಕುಲಪತಿಗಳು ಅಧ್ಯಕ್ಷತೆಯಲ್ಲಿ ಪಡೆದು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀ ನಾರಾಯಣರವರು ಮುಖ್ಯ ಅತಿಥಿಗಳಾಗಿದ್ದರು. ತಿ. ತಿ. ದೇ. ಗಳ [illegible] ತಮ್ಮಣ್ಣ ಅವರನ್ನು ವಿಶಿಷ್ಟ ಸೇವೆಗಾಗಿ ಸನ್ಮಾನಿಸಲಾಯಿತು.

## ಕನ್ನಡದಲ್ಲಿ ಶ್ರೀವೈಷ್ಣವ ಸಾಹಿತ್ಯ -ವಿವರಗಳಿಗಾಗಿ ಕರೆ

ಕನ್ನಡದಲ್ಲಿ ಈವರೆಗೆ ಬಂದಿರುವ ಶ್ರೀವೈಷ್ಣವ ಸಾಹಿತ್ಯದ ಸಮಗ್ರ ಪರಿಚಯ ಕೃತಿಯನ್ನು ಹೊರತರಲು ಪುಲಿಕೇಶಿ ಪ್ರಕಾಶನ ನಿರ್ಧರಿಸಿದೆ. ಇದಕ್ಕಾಗಿ ಈಗಾಗಲೇ ಶ್ರೀವೈಷ್ಣವ ಸಾಹಿತ್ಯದಲ್ಲಿ ಕೆಲಸಮಾಡಿದ ಲೇಖಕರು ತಮ್ಮ ಸಾಹಿತ್ಯಕೃತಿಯ ವಿವರಗಳನ್ನೂ, ತಮ್ಮ ಬಗೆಗಿನ ವಿವರಗಳನ್ನು ಶ್ರೀ ರಘುಸುತ, ಪುಲಕೇಶಿ ಪ್ರಕಾಶನ, ಪುಲಕೇಶಿ ರಸ್ತೆ, ಒಂದನೇ ಮೇನ್, ಯಶವಂತಪುರ, ಬೆಂಗಳೂರು-22–ಇವರಿಗೆ ಕಳುಹಿಸಿಕೊಡಬೇಂದು ಕೋರಲಾಗಿದೆ.

## ತಿರುಪತಿಗೆ ವಿದ್ಯುತ್ ಟೆಲಿಫೋನ್ ಎಕ್ಸ್ಚೇಂಜ್

ತಿರುಪತಿಯ ಶ್ರೀ ವೆಂಕಟೇಶ್ವರ ಇಂಜನೀಯರಿಂಗ್ ಕಾಲೇಜಿನ ಆವರಣದಲ್ಲಿ ಈ ವರ್ಷ ಹೊಸ ವಿದ್ಯುತ್ ದೂರವಾಣಿ ವಿನಿಮಯಕಚೇರಿಯನ್ನು ಆರಂಭಿಸಲಾಗುವುದೆಂದೂ, ಇದು ಇಡೀ ಆಂಧ್ರ ಪ್ರದೇಶದಲ್ಲಿ ಮೊದಲನೆಯದಾದ ಇಂತಹ ಕೇಂದ್ರವೆಂದೂ, ಆಂಧ್ರ ಪ್ರದೇಶದ ದೂರವಾಣಿ ಇಲಾಖೆಯ ಅಡಿಷನಲ್ ಜನರಲ್ ಮ್ಯಾನೇಜರ್ ಶ್ರೀ ಆರ್. ಶ್ರೀನಿವಾಸನ್ ತಿಳಿಸಿದ್ದಾರೆ.



ಶ್ರೀ ತಮ್ಮಣ್ಣ ಅವರನ್ನು ಸನ್ಮಾನಿಸುತ್ತಿರುವ ತಿ.ತಿ.ದೇ. ರಕ್ಷಣಾಧಿಕಾರಿ ಶ್ರೀ ಕೆ. ಕೃಷ್ಣಮೂರ್ತಿ ಅವರು.

## ಮುಂದಿನ ಸಂಚಿಕೆಯಲ್ಲಿ

### ಸಪ್ತಗಿರಿ. ನವಂಬರ್ — 1985

**ಕನಕದಾಸರು ಕಂಡ ಸಮಾಜ**
– ಡಾ॥ ಯು. ರಾಮಭಟ್ಟ

**ಜ್ಞಾನದೇವ**
– ಆರ್. ರಾಮಕೃಷ್ಣ

**ತಿರುಮಂಗೈ ಆಳ್ವಾರ್**
– ಡಿ. ಕೃಷ್ಣ ಅಯ್ಯಂಗಾರ್

**ಭಕ್ತಕವಿ ಎಳುತ್ತಚ್ಚನ್**
– ಎ. ಎಂ. ದೇವಿ

**ವಾತ್ಸಲ್ಯವಾರಿಧಿ**
– ವಿದ್ವಾನ್ ಬ. ನ. ಗುಂಡೂರಾವ್

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ – ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

### ನವಂಬರ್ 1985

| | | |
|---|---|---|
| 4. | ಸೋಮವಾರ | ಶ್ರೀತಿರುಮಲೆನಂಬಿ ಉತ್ಸವಾರಂಭ |
| 6. | ಬುಧವಾರ | ಶ್ರೀಮಣವಾಳ ಮಾಮುನಿ ಉತ್ಸವಾರಂಭ |
| 9. | ಶನಿವಾರ | ತಿರುಚಾನೂರು ಶ್ರೀ ಪದ್ಮಾವತೀದೇವಿ ಬ್ರಹ್ಮೋತ್ಸವ ಧ್ವಜಾರೋಹಣ |
| 10. | ಭಾನುವಾರ | ನರಕಚತುರ್ದಶಿ |
| 12. | ಮಂಗಳವಾರ | ದೀಪಾವಳೀ ಆಸ್ಥಾನ |
| 13. | ಬುಧವಾರ | ಶ್ರೀ ತಿರುಮಲನಂಬಿ ಶಾತ್ತುಮೊರೆ ತಿರುಚಾನೂರು ಶ್ರೀ ಪದ್ಮಾವತೀದೇವಿ ಗಜವಾಹನ |
| 14. | ಗುರುವಾರ | ಶ್ರೀ ಪದ್ಮಾವತೀದೇವಿ ಗರುಡೋತ್ಸವ |
| 15. | ಶುಕ್ರವಾರ | ಶ್ರೀ ಮಣವಾಳ ಮಾಮುನಿ ಶಾತ್ತುಮೊರೆ |
| 16. | ಶನಿವಾರ | ತಿರುಚಾನೂರು ಶ್ರೀ ಪದ್ಮಾವತೀದೇವಿ ರಥೋತ್ಸವ |
| 17. | ಭಾನುವಾರ | ಸ್ಕಂದಷಷ್ಠಿ, ತಿರುಚಾನೂರು ಶ್ರೀ ಪದ್ಮಾವತೀದೇವಿ ಬ್ರಹ್ಮೋತ್ಸವ ಚಕ್ರಸ್ನಾನ |
| 18. | ಸೋಮವಾರ | ತಿರುಮಂಗೈ ಆಳ್ವಾರ್ ಉತ್ಸವಾರಂಭ, ಶ್ರೀ ವೆಂಕಟೇಶ್ವರ ಸ್ವಾಮಿ ಪುಷ್ಪಯಾಗ |
| 23. | ಶನಿವಾರ | ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವಾರಂಭ |
| 27. | ಬುಧವಾರ | ,, ,, ತೆಪ್ಪೋತ್ಸವ ಸಮಾಪ್ತಿ ಕೃತ್ತಿಕಾದೀಪೋತ್ಸವ, ತಿರುಮಂಗೈ ಆಳ್ವಾರ್ ಶಾತ್ತುಮೊರೆ. |
| 28. | ಗುರುವಾರ | ತಿರುಪ್ಪಾಣಾಳ್ವಾರ್ ವರ್ಷತಿರುನಕ್ಷತ್ರ. |

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ–517501

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

